(7)

**ಜುಲೈ 1991 ಬೆಲೆ : ರೂ. 1-50**



**ಜಿ. ಎಸ್. ಮೋಹನ್**

**ಕೆ. ಸತ್ಯನಾರಾಯಣ**

**ಶ್ಯಾಮಲಾದೇವಿ**

**ವಿಲಿಯಂ ಥಾಂಸನ್ - ಉದಯ್ ಕುಮಾರ್**

ಸಂಪುಟ 7 ಸಂಚಿಕೆ 3

"ಅಚಲ" ಪತ್ರಿಕೆಯನ್ನು ಪಡೆಯಿ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು, ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವೈಯಾಲಿ ಕಾವಲ್
ಬೆಂಗಳೂರು–560 003.

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.



ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 10–00 |
| ಬಿಡಿ ಪ್ರತಿ | : | ರೂ. 1–50 |
| ವಿಶೇಷ ಪ್ರತಿ | : | ರೂ. 2–50 |
| ಆಜೀವ ಚಂದಾ | | |
| ವ್ಯಕ್ತಿಗಳಿಗೆ | : | ರೂ. 150–00 |
| ಸಂಸ್ಥೆಗಳಿಗೆ | : | ರೂ. 200–00 |

Printed at : PRINTSWELL, 78, 3rd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore-560 003.
Editor : N. GAYATRI

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಹಾಗೂ ಕರ್ನಾಟಕ ಲೇಖಕಿಯರ ಸಂಘದ ಸಂಯುಕ್ತ ಆಶ್ರಯದಲ್ಲಿ ಹೆಚ್. ವಿ. ಸಾವಿತ್ರಮ್ಮನವರ ಕೃತಿಗಳನ್ನು ಕುರಿತ ವಿಚಾರ ಸಂಕಿರಣ ನಡೆಯಿತು. ಆ ಸಂಕಿರಣದಲ್ಲಿ ಶ್ರೀ ಕೆ. ಸತ್ಯನಾರಾಯಣರವರು ಮಂಡಿಸಿದ ಪ್ರಬಂಧ "ಸಾವಿತ್ರಮ್ಮನವರ ಸಣ್ಣ ಕಥೆಗಳು–ಒಂದು ವಿವೇಚನೆ" ಪುಟ 7



ಎಂಬತ್ತು ವರ್ಷಗಳ ಹಿಂದೆ ಧಾರವಾಡದಲ್ಲಿ ಜನಿಸಿದ ಶ್ಯಾಮಲಾ ದೇವಿ ಬೆಳಗಾಂವಕರ್ ಉತ್ತರ ಕರ್ನಾಟಕದ ಮೊದಲ ಬರಹಗಾರ್ತಿ. ಅವರ ಬದುಕು ಬರಹಗಳನ್ನು ಪರಿಚಯಿಸುವ "ಶ್ಯಾಮಲಾ ಸಂಚಯ" ಕೃತಿಯನ್ನು ಸಂಪಾದಿಸಿದವರು ಡಾ॥ ವಿಜಯಾ ದಬ್ಬೆ. ಕರ್ನಾಟಕ ಲೇಖಕಿಯರ ಸಂಘದ ಪ್ರಕಟಣೆಯಾದ ಶ್ಯಾಮಲಾ ಸಂಚಯದಿಂದ ಆಯ್ದ "ತಾಯಿ ಮಾತಾಯಿ" ಕಥೆ ಪುಟ 13



## ಕಾನೂನು

"ಕಾನೂನು ಸಲಹೆ" ಅಚಲ ಆರಂಭಿಸಿರುವ ಹೊಸ ಅಂಕಣ ಖ್ಯಾತ ವಕೀಲರೂ, ಲೇಖಕಿಯೂ ಆಗಿರುವ ಶ್ರೀಮತಿ ಹೇಮಲತಾ ಮಹಿಷಿ ಅವರು ನಿಮ್ಮ ಸಮಸ್ಯೆಗೆ ಪರಿಹಾರ ಸೂಚಿಸುತ್ತಾರೆ. ನಿಮ್ಮ ಸಮಸ್ಯೆ ಬಿಂಬಿಸುವ ಪ್ರಶ್ನೆಗಳು "ಅಚಲ" ನಂ. 26, 1ನೇ ಮೇನ್. ವೈಯಾಲಿಕಾವಲ್ ಬೆಂಗಳೂರು–560 003. ಇಲ್ಲಿಗೆ ತಲುಪಲಿ. ನಿಮ್ಮ ಹೆಸರು ವಿಳಾಸ ಸ್ಪಷ್ಟವಾಗಿರಲಿ. ನೀವು ಇಚ್ಛಿಸಿದರೆ ನಿಮ್ಮ ಹೆಸರನ್ನು ಗೌಪ್ಯವಾಗಿಡಲಾಗುವುದು.

ಈ ತಿಂಗಳ ಸಲಹೆಗೆ ಪುಟ 6 ನೋಡಿ.

# ದೌರ್ಜನ್ಯದ ಸಂಸ್ಕೃತಿಗೆ ಧಿಕ್ಕಾರ

ದೌರ್ಜನ್ಯದ ಪ್ರಕರಣಗಳು ದೇಶದಲ್ಲಿ ಎಲ್ಲೆಡೆ ಮೇಲಿಂದ ಮೇಲೆ ನಡೆಯುತ್ತಲೇ ಇವೆ. ಅಸ್ಥಿರ ಹಾಗೂ ಅದಕ್ಷ ಸರ್ಕಾರಗಳ ಮೌನ ಸಮ್ಮತಿ. ಕೆಲವೊಮ್ಮೆ ಸಕ್ರಿಯ ಭಾಗವಹಿಸುವಿಕೆಗಳಿಂದ ಅಮಾನವೀಯ ಕೃತ್ಯಗಳು ನಾಗರೀಕವೆನಿಸಿಕೊಂಡ ನಮ್ಮ ಸಮಾಜದಲ್ಲಿನ ದಿನ ನಿತ್ಯದ ಸಂಗತಿಗಳಾಗಿವೆ. ಶ್ರೇಷ್ಠ ಸಂಸ್ಕೃತಿ ತಮ್ಮದೆಂದು ಬೀಗುವ ಈ ಭಾರತೀಯ ಸಮಾಜದಲ್ಲಿ ಮಹಾಭಾರತದ ದ್ರೌಪದಿಯ ಪ್ರಕರಣಗಳು ಪುನರಾವರ್ತನೆಯತ್ತ ಸಾಗಿರುವುದು ವಿಪರ್ಯಾಸವೇ ಸರಿ. ಕೊಪ್ಪಳದ ಮಹಂತ ಸ್ವಾಮಿಯ ಕುದುರೆ ಮೋತಿ ಪ್ರಕರಣ. ಕೆ. ಹೊಸಳ್ಳಿಯ ಜಮೀನು ವಿವಾದದ ನೆಪದಲ್ಲಿ ನಾಲ್ವರು ಮಹಿಳೆಯರನ್ನು ಬೆತ್ತಲೆ ಗೊಳಿಸಿ ಮೆರವಣಿಗೆ ಮಾಡಿದ ಪ್ರಕರಣಗಳು ಇನ್ನೂ ಕಡತದಲ್ಲಿರುವಾಗಲೇ ಕಳೆದ ತಿಂಗಳು ಆಂಧ್ರದಲ್ಲಿ ಇಂಥಹ ಎರಡು ಘಟನೆಗಳು ನಡೆದಿವೆ.

ಆಂಧ್ರದ ನಾಗಾರ್ಜುನ ಸಾಗರದಿಂದ 15 ಕಿ. ಮೀಟರ್ ದೂರದಲ್ಲಿರುವ ಚಿಲಕುರ್ತಿ ಗ್ರಾಮದಲ್ಲಿ ಕಳೆದ ತಿಂಗಳು ಮಹಾಭಾರತದ ಪುನರಾವರ್ತನೆಯೊಯಿತು. ಈ ಊರಿನ ರೆಡ್ಡಿ ಒಬ್ಬ ಜಮೀನುದಾರ ಇವನ ಸೋದರಿಯ ಹೆಸರು ಜಯಮ್ಮ. ವಿವಾಹಿತೆ. ಅವಳು ಗೊಲ್ಲರ ಕೋಮಿಗೆ ಸೇರಿದ ಯುವಕನೊಂದಿಗೆ ಓಡಿಹೋದಳು. ಇವಳಿಗೆ ಸಹಾಯ ಮಾಡಿರಬಹುದೆಂದು ಗೊಲ್ಲರ ಕೋಮಿಗೆ ಸೇರಿದ ಸೇವಕಿ ಮುತ್ತಮ್ಮಳ ಮೇಲೆ ಸಂಶಯ ಬಂತು. ಸಂಶಯ ಆಪಾದನೆಯಾಗಿ, ಅಸಹಾಯಕಿ ಮುತ್ತಮ್ಮನನ್ನು ಬೆತ್ತಲೆಗೊಳಿಸಲು ಜಮೀನುದಾರ ತನ್ನ ಸೇವಕರಿಗೆ ತಿಳಿಸಿದ. ಅವಳನ್ನು ಬೆತ್ತಲೆಗೊಳಿಸಿದ್ದೇ ಅಲ್ಲದೆ, ಅವಳದೇ ಕುಪ್ಪಸದಿಂದ ಅವಳ ಕೈ ಕಟ್ಟಿ ಅವಳ ಮೆರವಣಿಗೆ ನಡೆಯಿತು. ಮೆರವಣಿಗೆಯ ಸಂದರ್ಭದಲ್ಲಿ ಉದ್ದಕ್ಕೂ ಅವಳನ್ನು ದೊಣ್ಣೆಯಿಂದ ಹೊಡೆಯುತ್ತಾ, ಅವಳಿಗೆ ಯಾರೂ ರಕ್ಷಣೆ ಕೊಡದಂತೆ ಕಾವಲು ಕಾದರು. ಆಗ ಇವಳ ಪತಿ ಊರಿನಲ್ಲಿರಲಿಲ್ಲ. ಪಕ್ಕದೂರಿನಲ್ಲಿ ಕೂಲಿಗೆಂದು ಹೋಗಿದ್ದ. ಅಲ್ಲಿಯೇ ಇದ್ದ ಇವಳ ಹದಿನೈದು ವರ್ಷ ವಯಸ್ಸಿನ ಮಗ ಅಸಹಾಯಕನಾಗಿ ತಾಯಿಯ ದುರವಸ್ಥೆಯನ್ನು ನೋಡಲೇಬೇಕಾಯಿತು. ತನಗಾದ ಅಪಮಾನಕ್ಕೆ ಮುತ್ತಮ್ಮ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಳು. ಅವಳ ಜನ ಇದನ್ನು ತಪ್ಪಿಸಿದರು. ಈ ಘಟನೆಗೆ ಕಾರಣರಾದ ರೆಡ್ಡಿಗಳು ತಮ್ಮ ಕುಟುಂಬಗಳೊಡನೆ ಆ ಊರಿನಿಂದಲೇ ಪರಾರಿಯಾದರು.

ಈ ಘಟನೆಗೆ ಕೆಲವು ದಿನಗಳ ಮುಂಚೆಯಷ್ಟೇ ಆಂಧ್ರದ ಗುಂಟೂರು ಬಳಿ ಸುಂದೂರು ಗ್ರಾಮದಲ್ಲಿ ಹರಿಜನರ ಮರಣ ಹೋಮವೇ ನಡೆದಿತ್ತು. ಹರಿಜನ ಬಾಲಕನೊಬ್ಬ ಜಮೀನುದಾರನಿಗೆ ಕೆಟ್ಟ ಮಾತು ಗಳೆರಡನ್ನು ಆಡಿದನೆಂಬ ಚಿಕ್ಕ ಕಾರಣಕ್ಕಾಗಿ ಜಮೀನುದಾರರಾಗಿದ್ದ ಪ್ರಬಲ ಕೋಮಿನವರು ಒಂದಾದರು. ಹರಿಜನರನ್ನು ಹಿಡಿ ಹಿಡಿದು ಎಳೆದು ಕೈಕಾಲು ಕತ್ತರಿಸಿದರು. ಕಣ್ಣು ಗುಡ್ಡೆ ಕಿತ್ತರು. ಸತ್ತ ಇಪ್ಪತ್ತ ಕ್ಕಿಂತಲೂ ಹೆಚ್ಚು ಜನರನ್ನು ಗೋಣಿ ಚೀಲಗಳಲ್ಲಿ ಹಾಕಿ ಕಾಲುವೆಗೆ ಎಸೆದರು. ಎಂದಿನಂತೆ ಪ್ರಕರಣ ಸಂಸತ್ತನ್ನು ಪ್ರವೇಶಿಸಿತು. ಪತ್ರಿಕೆಗಳು ಸುದ್ದಿಯನ್ನು ದೊಡ್ಡದಾಗಿ ಪ್ರಕಟಿಸಿದವು. ಸರಕಾರ ಹರಿಜನರಿಗೆ ನೆರವು ನೀಡಲು ಮುಂದೆ ಬಂತು. ಆದರೆ ಅಲ್ಲಿನ ಹರಿಜನರು ಎಲ್ಲವನ್ನು ನಿರಾಕರಿಸಿದರು. ಅಪಾದಿತರಿಗೆ ಶಿಕ್ಷೆ ವಿಧಿಸಲೇ ಬೇಕು ಎನ್ನುವುದು ಎಲ್ಲರ ಒಕ್ಕೊರಲಿನ ಬೇಡಿಕೆಯಾಗಿದೆ.

ಈ ಘಟನೆಯಿಂದ ಇನ್ನೂ ಜನ ಚೇತರಿಸಿಕೊಳ್ಳದಿರುವಾಗಲೆ ಚಿಲಕುರ್ತಿಯ ಗೊಲ್ಲತಿಯ ಬೆತ್ತಲೆ ಮೆರವಣಿಗೆಯ ಘಟನೆ ನಡೆದದ್ದು, ಸುಂದೂರು ಘಟನೆಯಿಂದ ಬೆಚ್ಚಿದ್ದ ಪೋಲೀಸ್ ಅಧಿಕಾರಿಗಳು

ವಿಷಯ ತಿಳಿದ ತಕ್ಷಣ ಸ್ಥಳಕ್ಕೆ ಧಾವಿಸಿ ಅಪರಾಧಿಗಳ ಭೇಟಿಯಾಗ್ದಾದರು. ನೊಂದ ಮುತ್ತಮ್ಮಳಿಗೆ ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲಾಯಿತು. ಆದರೆ ಈ ಸಂದರ್ಭದಲ್ಲಿ ರೆವಿನ್ಯೂ ಡಿವಿಜನಲ್ ಅಧಿಕಾರಿ ನುಡಿದ ಮಾತುಗಳು ಆಶ್ಚರ್ಯ ಹುಟ್ಟಿಸುತ್ತದೆ ! "ಬಲಾತ್ಕಾರವಾಗಿ ಇವಳು ಲೈಂಗಿಕ ಕ್ರಿಯೆಗೆ ಒಳಗಾಗಿಲ್ಲ ಆದ್ದರಿಂದ ಪರಿಹಾರ ಪಡೆಯಲು ಈ ಮಹಿಳೆ ಅರ್ಹತೆ ಪಡೆದಿಲ್ಲ." ಅಮಾನುಷ ಘಟನೆಯೊಂದು ನಡೆದಿರುವಾಗ ಕಾನೂನಿನ ಇಂಚುಪಟ್ಟಿ ಹಿಡಿದು ಹೊರಟ ಅಧಿಕಾರಿಗಳ ಅಮಾನವೀಯತೆಗೆ ಎಲ್ಲೆಯೆಲ್ಲಿ ? ಹಾಗೆಯೇ ದುರ್ಬಲರನ್ನು ಹಿಡಿದು ತಮ್ಮ ಮನಸೋ ಇಚ್ಛೆ ಶಿಕ್ಷಿಸುವ ಅಧಿಕಾರ ಇವರಿಗೆ ಕೊಟ್ಟವರಾರು

ಇವು ಕರ್ನಾಟಕಕ್ಕೋ, ಆಂಧ್ರಕ್ಕೋ ಸೀಮಿತವಾದ ಪ್ರಕರಣಗಳಲ್ಲ. ಇಡೀ ರಾಷ್ಟ್ರವನ್ನೇ ರಾಕ್ಷಸೀ ಸಂಸ್ಕೃತಿಯು ಆಳುತ್ತಿದೆ. ನಮ್ಮ ದೇಶದ ಈಶಾನ್ಯದಲ್ಲಿರುವ ಪುಟ್ಟ ಗುಡ್ಡಗಾಡು ರಾಜ್ಯ ತ್ರಿಪುರಾದಲ್ಲಿ ಪರಿಸ್ಥಿತಿ ಇನ್ನೂ ವಿಷಮವಾಗಿದೆ, ಅಲ್ಲಿ ಅತ್ಯಾಚಾರ ಕೊಲೆ, ಸುಲಿಗೆಗಳು ದಿನ ನಿತ್ಯದ ಚಟುವಟಿಕೆಗಳಾಗಿವೆ. ಆಳುತ್ತಿರುವ ಕಾಂಗ್ರೆ TUJS ಸಂಮಿಶ್ರ ಸರ್ಕಾರದ ಸಮ್ಮತಿಯೊಂದಿಗೆ ನಡೆಯುತ್ತಿರುವ ಅಮಾನವೀಯ ಕೃತ್ಯಗಳಿಗೆ ಕೊನೆ ಮೊದಲಿಲ್ಲ. ತಮ್ಮನ್ನು ವಿರೋಧಿಸುವ ಎಲ್ಲರನ್ನೂ ನಿರ್ನಾಮ ಮಾಡಲು ಪಣ ತೊಟ್ಟಿರುವ ಆಳುವ ಸರ್ಕಾರದ ರಾಕ್ಷಸೀ ನೀತಿಗೆ ಅಲ್ಲಿನ ಜನತೆ ತತ್ತರಿಸುತ್ತಿದೆ. 6 ವರ್ಷದಿಂದ 60 ವರ್ಷದ ವಯಸ್ಸಿನ ಮಹಿಳೆಯರ ಮೇಲೆ ನಡೆಯುವ ಅತ್ಯಾಚಾರ, ಶಾಲೆಗೆ ಹೋದ ಹುಡುಗಿಯರನ್ನು ಎಳೆದೊಯ್ಯುವುದು, ಹೆಣ್ಣು ಮಕ್ಕಳನ್ನು ರಸ್ತೆಯಲ್ಲಿ ಕಾಡಿಸಿ ಚಿತ್ರ ಹಿಂಸೆ ಮಾಡುವುದು-ಇವು ತ್ರಿಪುರಾ ಕಾಂಗ್ರೆ ಸರ್ಕಾರದ ವೈಶಿಷ್ಟ್ಯಗಳಾಗಿವೆ,

ಸಾಮಾಜಿಕ ಅಸಮಾನತೆಯು ತೀಕ್ಷ್ಣತೆ ಅತಿ ಹೆಚ್ಚಾಗಿರುವ ಭಾರತದಂಥ ದೇಶದಲ್ಲಿ ದೌರ್ಜನ್ಯಗಳು ಸಂಸ್ಕೃತಿಯ ಭಾಗವಾಗಿವೆ. ಕೆಳ ಜಾತಿಯ ಕೆಳ ವರ್ಗದ ಜನತೆ ಈ ದೌರ್ಜನ್ಯಕ್ಕೆ ಸಿಲುಕಿದ ಬಲಿಪಶುಗಳಾಗಿರುವುದಷ್ಟೇ ಅಲ್ಲ, ತಮ್ಮ ಮೇಲಾಗುತ್ತಿರುವ ದೌರ್ಜನ್ಯವನ್ನು ಪ್ರತಿಭಟಿಸುತ್ತಿರುವವರೇ ಮತ್ತೆ ಮತ್ತೆ ಹೆಚ್ಚಾಗಿ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾರೆ. ತ್ರಿಪರಾದ ಪರಿಸ್ಥಿತಿ ಇದಕ್ಕೆ ಉತ್ತಮ ನಿದರ್ಶನ. ಆದ್ದರಿಂದ ದೌರ್ಜನ್ಯದ ವಿರೋಧದ ಚಳುವಳಿ ಹೆಚ್ಚು ಪ್ರಜ್ಞಾಪೂರ್ವಕವಾದದ್ದು ಮತ್ತು ಸಂಘಟಿತವಾದದ್ದು ಆಗಿರಬೇಕೆಂಬುದು ಇಂದಿನ ಅಗತ್ಯದ ಸವಾಲಾಗಿದೆ,

ನಮ್ಮ ಸಂಸ್ಕೃತಿಯ ಶ್ರೇಷ್ಠತೆಯ ಬಗ್ಗೆ ಬೀಗುವ ನಾವು ಇನ್ನಾದರೂ ಕಣ್ತೆರೆದು ವಾಸ್ತವಕ್ಕೆ ಪ್ರತಿಸ್ಪಂದಿಸಲೇ ಬೇಕಾಗಿದೆ. ಎಲ್ಲ ಪ್ರಗತಿಪರ ಶಕ್ತಿಗಳು ಒಂದಾಗಿ ದೌರ್ಜನ್ಯದ ನಾನಾ ಮುಖಗಳನ್ನು ಖಂಡಿಸಬೇಕಾಗಿದೆ, ಹಾಗೂ ಹೋರಾಡಬೇಕಾಗಿದೆ, ಮಾನವೀಯತೆಯ ಉಳಿವಿಗೆ, ಸಮಾಜದ ಸರ್ವರ ಉನ್ನತಿಗೆ ಎಲ್ಲ ಪಾಳೇಗಾರಿ ಮೌಲ್ಯಗಳ ವಿರುದ್ಧ ಹಾಗೂ ಜನ ವಿರೋಧಿ ನೀತಿಗಳ ವಿರುದ್ಧ ಗಟ್ಟಿ ದನಿಯೆತ್ತಿ ಕಾರ್ಯಪ್ರವೃತ್ತರಾಗಬೇಕಾಗಿದೆ.

# ಪ್ರತಿಭಾವಂತ ಮಹಿಳಾ ಇಂಜಿನಿಯರ್



ಕಳೆದ ಮೂರು ದಶಕಗಳಿಂದ ವಿದೇಶದಲ್ಲಿಯೇ ನೆಲೆಸಿದ್ದರೂ, ಡಾ॥ ನಳಿನಿ ಮೂರ್ತಿ ತಮ್ಮ ವೈಜ್ಞಾನಿಕ ಲೇಖನಗಳಿಂದ, ಕತೆಗಳಿಂದ ಕನ್ನಡಿಗರಿಗೆ ಚಿರಪರಿಚಿತರು. 1957ರಷ್ಟು ಹಿಂದೆಯೇ ಇಂಜಿನಿಯರಿಂಗ್ ರಂಗವನ್ನು ಆಯ್ದುಕೊಂಡು, ಇಂಗ್ಲೆಂಡಿನ ಮ್ಯಾನ್‌ಚೆಸ್ಟರ್ ವಿಶ್ವವಿದ್ಯಾಲಯದ ಮೊಟ್ಟ ಮೊದಲ ಮಹಿಳಾ ಇಂಜಿನಿಯರ್ ಆಗಿ ಹೊರಬಂದರು. ಕೆನಡಾದಲ್ಲಿ ಡಾಕ್ಟರೇಟ್ ಮುಗಿಸಿ, ಇದೀಗ ಅಲ್ಬರ್ಟಾದ ಕ್ಯಾಲಡೋನಿಯಾ ಕಾಲೇಜಿನಲ್ಲಿ ಕಂಪ್ಯೂಟರ್ ವಿಭಾಗದ ಪ್ರಾಧ್ಯಾಪಕಿಯಾಗಿರುವ ಡಾ॥ ನಳಿನಿ ಮೂರ್ತಿಯವರನ್ನು "ಅಚಲ" ಪರವಾಗಿ ನೇಮಿಚಂದ್ರ ಸಂದರ್ಶಿಸಿದರು. ತಾಂತ್ರಿಕ ರಂಗದಲ್ಲಿ ಹೆಜ್ಜೆ ಇಟ್ಟ ಮಹಿಳೆಯ ಅನುಭವಗಳನ್ನು ವಿದೇಶದಲ್ಲಿಯ ಮಹಿಳೆಯರ ಸ್ಥಿತಿಗತಿಗಳನ್ನು ಈ ಸಂದರ್ಶನದಲ್ಲಿ ಚರ್ಚಿಸಿದ್ದಾರೆ.

ಅಚಲ : ನಮಸ್ತೆ, ನಿಮ್ಮ ವೈಜ್ಞಾನಿಕ ಲೇಖನಗಳ ಓದಿದ್ದೀನಿ, ಇತ್ತೀಚೆಗೆ ನೀವು ವೈಜ್ಞಾನಿಕ ಕತೆಗಳನ್ನೂ ಬರೀತಿದ್ದೀರಿ, ವಿಶಿಷ್ಟ ದೃಷ್ಟಿಕೋನದ "ಊರ್ಮಿಳಾ" ಕಾದಂಬರಿ ಪ್ರಕಟವಾಗಿದೆ. ಆದರೆ ನಾನು ಅಚಲ ಪರವಾಗಿ ನಿಮ್ಮನ್ನು ಲೇಖಕಿಯಾಗಿ ಅಲ್ಲ. ವಿಜ್ಞಾನ-ತಂತ್ರಜ್ಞಾನದ ರಂಗದಲ್ಲಿ ಯಶಸ್ವಿಯಾದ ಮಹಿಳೆಯನ್ನಾಗಿ ಭೇಟಿಯಾಗಲು ಬಂದಿದ್ದೀನಿ. ನೀವು ವಿದ್ಯಾಭ್ಯಾಸ ಪ್ರಾರಂಭಿಸಿದ್ದು ಎಲ್ಲಿ ?

ಡಾ॥ ನಮೂ : ನಾ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದಿದೆ. 1957ರಲ್ಲಿ ಬಿ.ಎಸ್. (ಆನರ್ಸ್) ಮುಗಿಸಿದೆ. ಗಣಿತವನ್ನು ಮೇಜರ್ ಆಗಿ ತಗೊಂಡಿದ್ದೆ, ಗಣಿತದಲ್ಲಿ ಮೊದಲ ರ್‍ಯಾಂಕ್ ಬಂದಿತ್ತು.

ಅಚಲ : ಅಲ್ಲಿಂದ ಮುಂದೆ "ಇಂಡಿಯನ್ ಇನಿಸ್ಟಿಟ್ಯೂಟ್ ಆಫ್ ಸೈನ್ಸ್"ಗೆ ಸೇರಿದಿರಿ ಅಲ್ಲವೆ ?

ಡಾ॥ ನಮೂ : ಹೌದು, ಆಗ D.I.I.Sc., ಇತ್ತು ಈಗಿನ ಬಿ.ಇ.ಗೆ ಸಮಾನವಾದದ್ದು. ಐ,ಐ.ಎಸ್ಸಿಯ ಇಂಜಿನಿಯರಿಂಗ್ ವಿಭಾಗಕ್ಕೆ ಸೇರಿದೆ.

ಅಚಲ : ಆಗ ಹುಡುಗೀರು ಇಂಜಿನಿಯರಿಂಗ್ ತಗೊಳ್ತಾ ಇದ್ದರಾ ?

ಡಾ॥ ನಮೂ : ನನ್ನ ವಿಭಾಗದಲ್ಲಿ ನಾನೊಬ್ಬೇ ಇದ್ದದ್ದು, ಇಡೀ ಇನಿಸ್ಟಿಟ್ಯೂಟ್‌ನಲ್ಲಿ ಸುಮಾರು 300 ಹುಡುಗರಿದ್ದರೆ 18 ಹುಡುಗಿಯರಿದ್ದರು-ವಿಜ್ಞಾನ ಮತ್ತು ತಂತ್ರಜ್ಞಾನ ಎರಡೂ ಸೇರಿ.

ಅಚಲ : ಆಗ ಇನಿಸ್ಟಿಟ್ಯೂಟ್‌ನ ವಾತಾವರಣ ಹೇಗಿತ್ತು ? ಹುಡುಗಿಯರು ಇಂಜಿನಿಯರಿಂಗ್ ತೆಗೆದುಕೊಳ್ಳಲು ಪ್ರೋತ್ಸಾಹ ಇತ್ತಾ ?

ಡಾ॥ ನಮೂ ; ನಾ D.I.I.Sc.ಗೆ ಸೇರಿದಾಗ ಈ ಒಬ್ಬರು ಪ್ರೊಫೆಸರ್ ಇದ್ದರು ನೋಡಿ, ಬಹಳ ಗೋಳು ಹೊಯ್ದುಕೊಂಡರು, ನಾ ಸೇರಿದ್ದ "ಇ ಅಂಡ್ ಸಿ" ವಿಭಾಗದಲ್ಲಿ ನಾನೊಬ್ಬಳೇ ಹುಡುಗಿ ಇದ್ದದ್ದು.

ಅವರಿಗೆ ನಾ ಇಂಜಿನಿಯರಿಂಗ್ ಸೇರಿದ್ದೇ ಇಷ್ಟವಿರಲಿಲ್ಲ. ನನ್ನ ಪ್ರವೇಶ ನಿಲ್ಲಿಸುವಂತಿರಲಿಲ್ಲ. ಆದರೆ ಒಳಹೊಕ್ಕಮೇಲೆ ಮುಗ್ಗರಿಸಿ ಬೀಳುವಂತೆ ಎಲ್ಲಾ ಪ್ರಯತ್ನ ಮಾಡಿದರು. ಅವರ ಅಭಿಪ್ರಾಯದಲ್ಲಿ ಹುಡುಗಿಯರು, ಓದೋ ಹುಡುಗರನ್ನ ಚಿತ್ತ ಭ್ರಮಣೆ ಮಾಡ್ತಾರೆ. ಹುಡುಗಿಯರಿಗೆ ಇಂಜಿನಿಯರಿಂಗ್ ತಕ್ಕ ರಂಗವಲ್ಲ ಎಂಬ ಗಟ್ಟಿ ನಂಬುಗೆ ಅವರದು. ಆದರೆ ಪುಣ್ಯಕ್ಕೆ ಇನಿಸ್ಟಿಟ್ಯೂಟ್‌ನಲ್ಲಿ ಎಲ್ಲಾ ಪ್ರಾಧ್ಯಾಪಕರೂ ಹೀಗಿರಲಿಲ್ಲ. ಕೆಲವರು ಪಕ್ಷಪಾತ ಮಾಡುತ್ತಿದ್ದುದು ಉಂಟು "ಹುಡುಗಿಯರಿಗೆ ಮಾರ್ಕ್ಸ್ ತಗೊಂಡು ಏನಾಗಬೇಕು" ಅಂತ ನಮ್ಮ ಪೇಪರ್ ತಿದ್ದುವ ಸಮಯದಲ್ಲಿ ಹತ್ತು ಹಾಕೋ ಕಡೆ ಆರು ಹಾಕ್ತಾ ಇದ್ರು, ಹುಡುಗರಿಗೆ ಹತ್ತರ ಕಡೆ ಹನ್ನೆರಡು ಹಾಕೋರು. ಒಮ್ಮೆ ಹೋಗಿ ಚೆನ್ನಾಗಿ ಜಗಳ ಕಾದದ್ದೂ ನೆನಪಿದೆ. ಹಾಗೇನೇ ಕೆಲವು ಪ್ರಾಧ್ಯಾಪಕರು ಸ್ವಲ್ಪ ಹುಡುಗಿ ಆಕರ್ಷಕ ವಾಗಿದ್ರೆ ಎರಡು ಅಂಕ ಹೆಚ್ಚಿಗೆ ಹಾಕಿಬಿಡುವ ಪ್ರಸಂಗಗಳೂ ಇತ್ತು. ಅಂತೂ ನಮಗೆ ಬಂದ ಅಂಕಗಳು ನಮ್ಮದೋ ಅಲ್ಲವೋ ಅಂತ ತಿಳಿಯುತ್ತಿರಲಿಲ್ಲ. ಆದರೂ ಇನಿಸ್ಟಿಟ್ಯೂಟ್‌ನ ಒಟ್ಟು ಅನುಭವ ಚೆನ್ನಾಗಿಯೇ ಇತ್ತು. ಹುಡುಗರು ಸಹಕರಿಸಿದರು, ನಮ್ಮೊಡನೆ ಸಹಜವಾಗಿ ವರ್ತಿಸಿದರು.

ಅಚಲ : ಆ ಪ್ರೊಫೆಸರ್ ಅವರಿಂದ ನಿಮಗೇನೂ ವಿಶೇಷ ಕಿರುಕುಳ ಆಗಲಿಲ್ಲವೇ ?

ಡಾ॥ ನಮೂ : ಓಹ್, ತುಂಬಾನೇ ಗೋಳು ಹೊಯ್ದುಕೊಂಡರು, ಮೊದಲ ವರ್ಷವಂತೂ ಕೋರ್ಸ್ ಬಿಟ್ಟುಬಿಡೋಣ ಅನಿಸುವಷ್ಟು ಕಾಟ ಕೊಟ್ಟರು, ಮತ್ತೇನಿಲ್ಲ ಕ್ಲಾಸ್‌ಗೆ ಐದು ನಿಮಿಷ ತಡವಾಗಿ ಹೋದೆ ಅಂದುಕೊಳ್ಳಿ "ಹುಡುಗಿಯರೇ ಹೀಗೆ, ಅವರಿಗೆ ಸಮಯ ಪ್ರಜ್ಞೆಯೇ ಇರೋಲ್ಲ, ಅಂತ ಹುಡುಗೀರನ್ನೆಲ್ಲ ಸಾರ್ವತ್ರಿ ಕವಾಗಿ ದೂರಿಬಿಡುವರು. ಯಾವುದಾದರೂ ಪರೀಕ್ಷೆಯಲ್ಲಿ ಅಂಕ ಕಮ್ಮಿ ಬಂತು, "ಹುಡುಗೀರೆಲ್ಲ ಇಂಜಿನಿಯರಿಂಗ್ ಆಗೋಲ್ಲ" ಅನ್ನೋ ಕೊಂಕು ಮಾತು, ಸಾಲದ್ದಕ್ಕೆ ನಮ್ಮ ತಂದೆ ಗಣ್ಯ ಇಂಜಿನಿಯರ್ ಆಗಿದ್ದರು. ನಾನೇನಾದರೂ ತಪ್ಪು ಮಾಡಿದರೆ "ಸೀತಾರಾಮ್ ಅವರ ಮಗಳು, ನಿನಗೆ ಬರೋಲ್ವೆ" ಅನ್ನೋರು. ನನಗೇನು ಇಂಜಿನಿಯರಿಂಗ್ "ಜೀನ್"ನಲ್ಲಿ ಬರಲು ಸಾಧ್ಯವಿತ್ತೆ ? (ನಗು)

ಅಚಲ : ಅಂತೂ ಹುಡುಗರೆದುರು ಇಂಥಾ ಟೀಕೆಗಳು ಬಹಳ ನೋಯಿಸಿರಬೇಕು, ಹೊಸ ರಂಗಗಳಿಗೆ ಪ್ರವೇಶಿಸಿದ ಹುಡುಗಿಯರ ಮೇಲೆ ಅಖಂಡ ಜವಾಬ್ದಾರಿ ಇರುತ್ತೆ. ಅವರ ಪ್ರತಿ ಸೋಲು. ಅವರೊಬ್ಬರ ವೈಯುಕ್ತಿಕ ಸೋಲಾಗೋದಿಲ್ಲ, ಇಡೀ ಹೆಣ್ಣು ಕುಲದ ಸೋಲಾಗುತ್ತೆ, ಕೊರತೆಯಾಗುತ್ತೆ.

ಡಾ॥ ನಮೂ : ಅದು ನಿಜ, ಆದರೂ ಇನಿಸ್ಟಿಟ್ಯೂಟ್ ಒಂದು ತರಹ ಚೆನ್ನಾಗಿಯೇ ಇತ್ತು 1960ರಲ್ಲಿ D.I.I.Sc. ಗಳಿಸಿದೆ. ಅದಾದ ಕೂಡಲೆ ಜರ್ಮನಿಯಲ್ಲಿ ಕೆಲಸದ ಅವಕಾಶ ಸಿಕ್ಕಿತು. ಅಷ್ಟರಲ್ಲಿ ನನ್ನ ವಿವಾಹ ಗೊತ್ತಾಗಿತ್ತು. ಆತ ಕೂಡ ಜರ್ಮನಿಯಲ್ಲಿ ಇದ್ದದ್ದು ಅನುಕೂಲವಾಯಿತು. ಮದುವೆಯಾಗುವಷ್ಟರಲ್ಲಿ ನನ್ನ ವೀಸಾ ಎಲ್ಲಾ ತಯಾರಾಗಿಬಿಟ್ಟಿತ್ತು. ಎಂಥಾ ಕಾಕತಾಳೀಯ ನೋಡಿ, ಅಲ್ಲಿ 8 ತಿಂಗಳು ಕೆಲಸ ಮಾಡಿದೆ, ಅದಾದ ಮೇಲೆ ನನ್ನ ಪತಿ ಇಂಗ್ಲೆಂಡಿಗೆ ಹೋದರು. ಅವರೂ ಇಂಜಿನಿಯರ್. ಆಗಲೇ ನನ್ನ ಮೊದಲ ಮಗನ ಜನನವೂ ಆಗಿತ್ತು. ಎರಡು ತಿಂಗಳು ವಿಶ್ರಾಂತಿ ತಗೊಂಡೆ, ನಂತರ ಮ್ಯಾಂಚೆಸ್ಟರ್ ವಿಶ್ವವಿದ್ಯಾನಿಲಯದಲ್ಲಿ "ಕಂಟ್ರೋಲ್ ಇಂಜಿನಿಯರಿಂಗ್"ನಲ್ಲಿ ಎಂ.ಎಸ್ಸಿ.ಗೆ ಸೇರಿಕೊಂಡೆ. ಎಂ.ಎಸ್ಸಿ. ಮುಗಿಸೋದೆ ಒಂದು ವರ್ಷ ಹಿಡಿಸಿತ್ತು. ಅಲ್ಲಿ ಹೊರ ದೇಶದ ವಿದ್ಯಾರ್ಥಿಗಳು ಸಾಮಾನ್ಯವಾಗಿ ಒಂದೂವರೆ ವರ್ಷ ಎಂ.ಎಸ್ಸಿ. ಮಾಡಬೇಕಿತ್ತು ಆದರೆ ಒಂದು ವರ್ಷಕ್ಕೆ ನನ್ನ ಥೀಸೀಸ್ ಮುಗಿದಿತ್ತು.

"ವಿದೇಶಿ ವಿದ್ಯಾರ್ಥಿಗಳು 18 ತಿಂಗಳು ಕಡ್ಡಾಯ ಇರಬೇಕು" ಎಂದು ಡಿಗ್ರಿ ಕೊಡಲಿಲ್ಲ. ನನ್ನ ಸೂಪರ್‌ವೈಸರ್ ನನ್ನ ಸಹಾಯಕ್ಕೆ ಬಂದರು. "ಆಕೆ ಕೆಲಸ ಮುಗಿಸಿರೋವಾಗ ಏಕೆ ಕೊಡೋಲ್ಲ" ಎಂದೆಲ್ಲ ವಾದಿಸಿ, ಅಂತೂ ಒಂದೇ ವರ್ಷಕ್ಕೆ ಎಂ.ಎಸ್ಸಿ. ದೊರೆಯಿತು.

ಅಚಲ : ಅಲ್ಲಿ ಇಂಜಿನಿಯರಿಂಗ್ ವಿಭಾಗದಲ್ಲಿ ಮಹಿಳೆಯರಿದ್ದರೆ ? ನಿಮಗೆ ಅಲ್ಲಿ ಇಂಜಿನಿಯರಿಂಗ್ ಸೇರಲು ಪ್ರೋತ್ಸಾಹ ಇತ್ತೆ ?

ಡಾ॥ ನಮೂ : ನನ್ನ ವಿಭಾಗದ ಮುಖ್ಯಸ್ಥರು ಹೇಳ್ತಾ ಇದ್ರು "ನೀನು ಇಂಜಿನಿಯರಿಂಗ್ ವಿಭಾಗದಲ್ಲಿ ನಾವು ತೆಗೆದುಕೊಂಡಿರೋ ಮೊದಲ ಮಹಿಳೆ. ನೀನೇನಾದ್ರೂ ಚೆನ್ನಾಗಿ ಮಾಡದಿದ್ರೆ ನಾವು ಪುನಃ ಹುಡುಗೀರನ್ನ ತಗೋಳ್ತಾ ಇರಲಿಲ್ಲ" ಅಂದಿದ್ದರು.

ಅಚಲ : ಅಲ್ಲಿ ನೀವು ಭಾರತೀಯ ಮಹಿಳೆಯ ಪ್ರತಿನಿಧಿ ಆಗಿ ಅಲ್ಲ, ಇಡೀ ಪ್ರಪಂಚದ ಮಹಿಳೆಯರ ಪ್ರತಿನಿಧಿಸಿದ್ದಿರಿ.

ಡಾ॥ ನಮೂ ; ಹೌದು ಎಂ.ಎಸ್ಸಿ. ಮುಗಿಸಿ ಭಾರತಕ್ಕೆ ಹಿಂತಿರುಗಿದೆವು. ಒಂದಷ್ಟು ದಿನ ಬಾಂಬೆಯಲ್ಲಿ TIFRನಲ್ಲಿ ಕೆಲಸ ಮಾಡಿದೆ. ಅಷ್ಟರಲ್ಲಿ ಕೆನಡಾದ ಹಾಲಿಫಾಕ್ಸ್ ವಿಶ್ವವಿದ್ಯಾನಿಲಯದಲ್ಲಿ ನನಗೆ ಪಿ.ಎಚ್.ಡಿ.ಗೆ ಸೀಟು ಸಿಕ್ಕಿತು. ಹಾಗಾಗಿ ನಾವಿಬ್ಬರು ಕೆನಡಾಗೆ ಹೊರಟೆವು. ಪಿ.ಎಚ್.ಡಿ. ಮೂರೂವರೆ ವರ್ಷಕ್ಕೆ ಮುಗಿಸಿದೆ. ಮಧ್ಯೆ ನನ್ನ ಎರಡನೇ ಮಗ ಹುಟ್ಟಿದ್ದ. ಮಗು ಥೀಸೀಸ್ ಮುಗಿದ ಮೇಲೆ ಹುಟ್ಟುವಂತೆ ಯೋಚಿಸಿದ್ವಿ. ಆದರೆ ಥೀಸೀಸ್ ತಡವಾಯ್ತು, ಮಗು ಕಾಯಬೇಕಲ್ಲ ! (ನಗು) ಈ ವಿಶ್ವವಿದ್ಯಾಲಯದಿಂದ ಪಿ.ಎಚ್.ಡಿ. ಪಡೆದ ಮೂರನೇ ವಿದ್ಯಾರ್ಥಿ ನಾನು. ಅಲ್ಲಿಂದ ಪಿ.ಎಚ್.ಡಿ. ಪಡೆದ ಮೊದಲ ಮಹಿಳಾ ವಿದ್ಯಾರ್ಥಿ.

ಅಚಲ : ಎಲ್ಲಾ ಕಡೆಯೂ ನೀವು ಪ್ರಥಮ ಮಹಿಳೆಯಾಗಿ ದಾಖಲೆ ಸ್ಥಾಪಿಸಿದ್ರಿ. ಕೆನಡಾದ ವಾತಾವರಣ ಹೇಗಿತ್ತು ಹೇಳಿ.

ಡಾ॥ ನಮೂ ; ಇಲ್ಲಿ ಅಂಥಾ ಪೂರ್ವಗ್ರಹಗಳ ಕಾಣಲಿಲ್ಲ. ಇಲ್ಲಿ Professional Engineers Association ಇದೆ. ಇಲ್ಲಿ ಇಂಜಿನಿಯರ್ ಆಗಿ ಪ್ರಾಕ್ಟೀಸು ಮಾಡಬೇಕೆಂದರೆ ಅದರ "ಮೆಂಬರ್" ಆಗಿರಲೇಬೇಕು. 1970ರಲ್ಲಿ ನನಗೆ "ಮೆಂಬರ್‌ಶಿಪ್" ಸಿಕ್ಕಿತು. ಆ ಅಸೋಸಿಯೇಶನ್‌ನ 15 ವರ್ಷಗಳ ಇತಿಹಾಸದಲ್ಲಿ "ಮೆಂಬರ್‌ಶಿಪ್" ಪಡೆದ ಮೊದಲ ಮಹಿಳೆ ನಾನಾಗಿದ್ದೆ. ಅದಕ್ಕೆ ಅವರು ವಿಶೇಷ ಕಾರ್ಯಕ್ರಮ ಏರ್ಪಡಿಸಿ, ನನ್ನನ್ನು ಸ್ವಾಗತಿಸಿದರು. ಪೇಪರ್‌ನಲ್ಲಿ ಹಾಕಿಸಿದ್ದರು.

ಅಚಲ : ನೀವು ಮೊಟ್ಟ ಮೊದಲಿಗೆ ಇಂಜಿನಿಯರಿಂಗ್ ರಂಗ ಆಯ್ದಾಗ ಎದುರಾದ ಪ್ರತಿಕೂಲ ಪರಿಸ್ಥಿತಿಗಳ ನೆನೆಸಿಕೊಂಡರೆ. ಅಂಥಾ ಅದ್ಭುತ ಸ್ವಾಗತ ಖುಷಿ ಕೊಟ್ಟಿರಬೇಕು ಅಲ್ಲಾ ?

ಡಾ॥ ನಮೂ : ಖಂಡಿತಾ.

ಅಚಲ : ಮುಂದೇನು ಮಾಡಿದ್ರಿ ?

ಡಾ॥ ನಮೂ : ನನ್ನ ಪತಿ ಎಂ.ಎಸ್ಸಿ. ಮಾಡಿದ್ರು. ಅಲ್ಲಿಯ "ಯುಟಿಲಿಟೀಸ್"ನಲ್ಲಿ ಸೇರಿಕೊಂಡಿದ್ದರು. ಇಲ್ಲಿಯ

ಕೆ.ಇ.ಬಿ. ತರಹದ ಸರ್ಕಾರಿ ಉದ್ಯೋಗ ಅದು. ಅಲ್ಲಿಂದ ಜಾಂಬಿಯಾಗೆ ಹೊರಟರು ನನ್ನ ಪಿ.ಎಚ್.ಡಿ. ಇನ್ನೂ ಮುಗಿದಿರಲಿಲ್ಲ. ಮಕ್ಕಳೊಂದಿಗೆ ಉಳಿದೆ, ಪಿ.ಎಚ್.ಡಿ. ಮುಗಿಸಿ ಜಾಂಬಿಯಾಗೆ ಹೋದೆ.

ಅಚಲ : ನಿಮ್ಮದು ಬಹಳವೇ ಸಾಹಸಮಯ ಬದುಕು. ಮದುವೆ, ಮಕ್ಕಳ ನಡುವೆಯೇ ನಿಮ್ಮ ಗುರಿ ಬಿಡದೆ ಎಂ.ಎಸ್ಸಿ., ಪಿ.ಎಚ್.ಡಿ. ಮುಗಿಸಿ ಹೊರಟಿರಿ. ಜಾಂಬಿಯಾದಲ್ಲಿ ನೀವು ಎಲ್ಲಿ ಸೇರಿದ್ರಿ ?

ಡಾ॥ ನಮೂ : ಅಲ್ಲಿ ಜಾಂಬಿಯಾ ವಿಶ್ವವಿದ್ಯಾಲಯದಲ್ಲಿ ಕಂಪ್ಯೂಟರ್ ವಿಭಾಗದಲ್ಲಿ ಕೆಲಸ ಖಾಲಿ ಇತ್ತು, ಕಂಪ್ಯೂಟರ್ ವಿಭಾಗವನ್ನು ಪೂರ್ಣ ರೂಪದಲ್ಲಿ ಸುಧಾರಿಸಿದೆ. 1980ರಲ್ಲಿ ನಾ ಜಾಂಬಿಯಾ ಬಿಡುವಾಗ ಅಲ್ಲಿ ಕಂಪ್ಯೂಟರ್ ವಿಭಾಗ ಸ್ನಾತಕೋತ್ತರ ಪದವಿ ನೀಡುವಷ್ಟು ಮುಂದೆ ಬಂದಿತ್ತು.

ಅಚಲ : ಈಗಾಗಲೇ ಕಂಪ್ಯೂಟರ್ ಯುಗದ ಆಗಮನ ಅಲ್ಲವೇ ? ಭಾರತದಲ್ಲಿ ಕಳೆದ ದಶಕದಲ್ಲಿ ಕಂಪ್ಯೂಟರ್ ಧಾಳಿ ಕಂಡಿದ್ದೇವೆ. ಜಾಂಬಿಯಾ ಬಿಟ್ಟು ಬಂದ ಮೇಲೆ ಏನು ಮಾಡಿದ್ರಿ ?

ಡಾ॥ ನಮೂ ; ಮತ್ತೆ ಕೆನಡಾಗೆ ಬಂದೆವು, ಆಲ್‌ಬರ್ಟ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಳಾಗಿ ಸೇರಿಕೊಂಡೆ. ಆರು ವರ್ಷ ಅಲ್ಲಿ ಕಲಿಸಿದೆ. ಈಗ "ಕಾಲೇಜ್ ಆಫ್ ನ್ಯೂ ಕ್ಯಾಲಡೋನಿಯಾ"ದಲ್ಲಿ ಐದು ವರ್ಷದಿಂದ ದುಡೀತಾ ಇದ್ದೇನೆ, ಇನ್ನು ಇಲ್ಲಿಯೇ ನಿವೃತ್ತಿ.

ಅಚಲ : ಆಲ್‌ಬರ್ಟ್ ವಿಶ್ವವಿದ್ಯಾಲಯನ ಏಕೆ ಬಿಟ್ಟಿರಿ ?

ಡಾ॥ ನಮೂ : ಅಲ್ಲಿ ನೋಡಿ ನನ್ನ ನೌಕರಿ ಖಾಯಂ ಇರಲಿಲ್ಲ ವರ್ಷ ವರ್ಷ "ಟೀಚಿಂಗ್ ಕಂಟ್ರಾಕ್ಟ್" ಕೊಡ್ತಾ ಇದ್ದರು, ನನ್ನ ವಿದ್ಯಾರ್ಥಿಗಳಿಗೆ ನನ್ನ ಪಾಠ ತುಂಬಾ ಹಿಡಿಸಿತ್ತು. ನನಗೆ ಬರುತ್ತಿದ್ದ "ಸ್ಟೂಡೆಂಟ್ ರಿವ್ಯೂ" ಬಹಳ ಚೆನ್ನಾಗಿರುತ್ತಿತ್ತು, ಹೀಗಿದ್ದರೂ ನನ್ನ ಕೆಲಸ ಖಾಯಂ ಮಾಡಿರಲಿಲ್ಲ. ಅಲ್ಲಿಯ ಚೇರ್‌ಮನ್‌ರನ್ನು ಹೋಗಿ ಕೇಳಿದಾಗ "ನಿಮ್ಮ ಪತಿ ಒಳ್ಳೆ ಸರಕಾರಿ ಉದ್ಯೋಗದಲ್ಲಿದ್ದಾರೆ ಒಳ್ಳೆ ಸಂಬಳ ಸೌಲಭ್ಯಗಳಿವೆ. ನೀವು ಏತಕ್ಕೆ ಖಾಯಂ ಬೇಕು, ಅಂತಾ ಒದ್ದಾಡ್ತೀರಿ, ನಿಮಗೆ ನಿವೃತ್ತಿ ಆಗೋವರೆಗೂ ನೀವು ಇಲ್ಲಿ ಇರಬಹುದು" ಅಂದು ಬಿಟ್ಟರು.

ಅಚಲ ; ಅಂದರೆ ಅಲ್ಲಿಯೂ ಹೆಣ್ಣಿನ ದುಡಿಮೆ ಏನಿದ್ದರೂ ಸೆಕೆಂಡರಿ ಅನ್ನೋ ಭಾವನೆಯೇ !

ಡಾ॥ ನಮೂ : ಹೌದು ಆಗಲೇ ನಾನು ಆಲ್‌ಬರ್ಟಾ ವಿಶ್ವ ವಿದ್ಯಾಲಯ ಬಿಟ್ಟಿದ್ದು, ಎಲ್ಲಾ ಪುರುಷ ಪ್ರಧಾನರಂಗ ದಲ್ಲಿಯೂ ಸ್ತ್ರೀಯರ ಸ್ಥಿತಿ ಹೀಗೆಯೇ, ಆಲ್‌ಬರ್ಟಾದಲ್ಲಿ 17 ವರ್ಷಗಳ ಕಾಲ "ಕಾಂಟ್ರಾಕ್ಟ್" ಮೇಲೆ ದುಡೀತಾ ಇರೋ ಮಹಿಳೆಯರಿದ್ದಾರೆ. ಇಲ್ಲಿ ಸುಭದ್ರತೆಯ ಕೆಲಸಗಳೆಂದರೆ ವಿಶ್ವವಿದ್ಯಾಲಯವು ಉಳಿದಂತೆ ನಿಮ್ಮ "ಎಂಪ್ಲಾಯರ್" ಶನಿವಾರ ಕರೆದು "ಸೋಮವಾರದಿಂದ ಬರಬೇಡ" ಎಂದು ಹೇಳಿಬಿಡಬಹುದು. ಆದರೆ ಈ ಕಾಂಟ್ರಾಕ್ಟನಲ್ಲಿ ನೋಡಿ ಒಂದು ವರ್ಷದಲ್ಲಿ ಎರಡು ತಿಂಗಳು ಸಂಬಳ ಬರುತ್ತಿರಲಿಲ್ಲ. ಪ್ರತಿ ಜನವರಿಗೆ ಏನಪ್ಪಾ ಕಂಟ್ರಾಕ್ಟ್ "ರಿನ್ಯೂ ಮಾಡ್ತೀರಾ ?" ಅಂತ ಬೇಡಬೇಕಿತ್ತು. ಖಾಯಂ ಮಾಡೋಲ್ಲ ಅಂತ ಗೊತ್ತಾದ ಕೂಡಲೆ ವಿಶ್ವವಿದ್ಯಾಲಯ ಬಿಟ್ಟೆ, ಕ್ಯಾಲಡೋನಿಯಾ ಕಾಲೇಜಿಗೆ ಸೇರಿಕೊಂಡೆ.

ಅಚಲ : ಅಂತೂ ನಿಮ್ಮ ಸಾಹಸಮಯ ಕೆರೀಯರ್ ಏರು-ತಗ್ಗು ದಾಟಿ ಬಂದು ಸಮ ತಟ್ಟಿಗೆ ನಿಂತಿದೆ

ಡಾ॥ ನಮೂ : ನಿಜ, ನನ್ನ ಪತಿ ಹೇಳ್ತಾ ಇರ್‍ತಾರೆ, "ಇನ್ನೂ ಎಷ್ಟು ದಿನ ದುಡಿಯೋದು ಕೆಲಸ ಬಿಟ್ಟು ಬಿಡು" ಅಂತಾರೆ ನಾ ಹೇಳ್ತೀನಿ "ಇಷ್ಟು ದಿನ ಕಷ್ಟಪಟ್ಟುಕೊಂಡು ಕೆಲಸ ಮಾಡ್ತಾ ಇದ್ದೆ, ಮಕ್ಕಳು ಚಿಕ್ಕವರಿದ್ದರು ಈಗ ದೊಡ್ಡವರಾಗಿದ್ದಾರೆ ಹಾಯಾಗಿ, ಆರಾಮಾಗಿ ಕೆಲಸ ಮಾಡ್ತೀವಿ",

ಅಚಲ : ನಿಮ್ಮಲ್ಲಿ ನಿವೃತ್ತಿಯ ವಯಸ್ಸೇನು ?

ಡಾ॥ ನಮೂ : 65 ವರ್ಷಕ್ಕೆ ಅಂತಾ ಲೆಖ್ಖ, ಆದರೆ ನಿವೃತ್ತಿ ಕಡ್ಡಾಯವಲ್ಲ. ದೈಹಿಕವಾಗಿಯೋ ಅಥವಾ ಮಾನಸಿಕವಾಗಿಯೋ ನಿವೃತ್ತರಾದರೆ ಮಾತ್ರ ನಿವೃತ್ತಿಯನ್ನು ಹೇರಬಲ್ಲರು. ಇಲ್ಲದಿದ್ದರೆ ನಿಮಗೆ ಬೇಕು ಅಂದಷ್ಟು ವರ್ಷವೂ ದುಡಿಯಬಹುದು, ದುಡಿಮೆಯನ್ನು ಮಾನವೀಯ ಹಕ್ಕು ಅಂತಾ ಭಾವಿಸುತ್ತಾರೆ.

ಅಚಲ ; ನಿಮ್ಮ ವಿದ್ಯಾಭ್ಯಾಸ-ವೃತ್ತಿಯ ಬದುಕಿನ ಒಂದು ಚಿತ್ರ ಸಿಕ್ಕಿತು. ನಿಮ್ಮ ವೈಯುಕ್ತಿಕ ಬದುಕನ್ನು ಒಂದಿಷ್ಟು ತಿಳಿಯಬಹುದಲ್ಲ ? ನಿಮ್ಮ ಓದು ನಿಮ್ಮ ವಿವಾಹಕ್ಕೆ ಅಡ್ಡಿಯಾಗಲಿಲ್ಲವೇ ? ಈಗಲೂ ಹೆಚ್ಚು ಓದಿದ ಹುಡುಗಿ ಬೇಡ ಅನ್ನೋರಿದ್ದಾರೆ.

ಡಾ॥ ನಮೂ : ನನ್ನ ಇಷ್ಟು ವಿದ್ಯಾಭ್ಯಾಸ ನನ್ನ ವಿವಾಹಕ್ಕೇನು ತೊಂದರೆಯಾಗಲಿಲ್ಲ. ಭಾರತದಲ್ಲಿಯೇ ಇಂತಹ ಪೂರ್ವಗ್ರಹಗಳು ಕಡಿಮೆ ಅನ್ನಬೇಕು. ಇಲ್ಲ ಪಾಶ್ಚಮಾತ್ಯ ದೇಶಗಳಲ್ಲಿ ಸ್ತ್ರೀಯರು ತೀರಾ 'ಪ್ರೊಫೆಷನಲ್' ಆದರೆ ಇಷ್ಟ ಪಡೋಲ್ಲ, ಇಷ್ಟು ವರ್ಷ ಕಂಪ್ಯೂಟರ್ ವಿಭಾಗದಲ್ಲಿ ಪ್ರಾಧ್ಯಾಪಕಿ ಆಗಿದ್ದೀನಿ, 35-40 ಹುಡುಗರಿಗೆ, ಮೂರೋ-ನಾಲ್ಕೋ ಹುಡುಗಿಯರಿರ್‍ತಾರೆ, ಹಾಗೆ ನೋಡಿದರೆ ಹುಡುಗಿಯರು ಕಂಪ್ಯೂಟರ್ ವಿಜ್ಞಾನವನ್ನು ಬಹಳ ಬೇಗ ಕಲೀತಾರೆ, ಹೀಗಿದ್ದೂ ಈ ಪರಿಸ್ಥಿತಿ.

ಅಚಲ : ವಿದೇಶದಲ್ಲಿ ಹುಡುಗಿಯರನ್ನ ವಿಜ್ಞಾನ ಮತ್ತು ತಂತ್ರಜ್ಞಾನದತ್ತ ಆಕರ್ಷಿಸಲು WISE. GIST ಅಂತಾ ಸಂಸ್ಥೆಗಳು ದುಡಿಯುತ್ತವೆ ಅಂತ ಕೇಳಿದ್ದೆ. ವಿದೇಶದಲ್ಲಿ ಮಹಿಳೆಯರು ದಂಡಿನಲ್ಲೂ ಸೇರ್ಪಡೆಯಾಗಿರೋದು ನೋಡಿದ್ದೀವಿ. ಹೀಗಾಗಿ ಮಹಿಳೆಯರು ಬಹಳ ಮುಂದುವರೆದಿದ್ದಾರೆ ಅಂದುಕೊಂಡಿದ್ದೆ ಅದು ನಿಜ ಅಲ್ಲವೆ ?

ಡಾ॥ ನಮೂ : ಇಲ್ಲಿ ಇದು ಸತ್ಯವಲ್ಲ ಒಂದು ರೀತಿ ಸುಳ್ಳು ಪ್ರಚಾರ ಅನ್ನಬೇಕು. ಮೊನ್ನೆ ನೋಡಿ ನಮ್ಮ ಕಾಲೇಜಿನವರು ಒಂದು ವರದಿ ಕೊಟ್ಟಿದ್ರು-"ನಾವು ಹೆಂಗಸರನ್ನು ಪ್ರೋತ್ಸಾಹಿಸುತ್ತೇವೆ. ನಮ್ಮಲ್ಲಿ ಶೇಕಡಾ 40ರಷ್ಟು ಮಹಿಳೆಯರಿದ್ದಾರೆ" ಅಂತ, ಕುತೂಹಲದಿಂದ ಒಂದಿಷ್ಟು ತನಿಖೆ ಮಾಡಿದರೆ ವಿಜ್ಞಾನ, ತಂತ್ರಜ್ಞಾನದ ರಂಗದಲ್ಲಿ ಕೇವಲ ಇಬ್ಬರು ಮಹಿಳೆಯರಿದ್ದಾರೆ, ಉಳಿದಂತೆ ಹೆಂಗಸರು ಗುಮಾಸ್ತರಾಗಿ ವಯಸ್ಕ ಶಿಕ್ಷಣದಲ್ಲಿ ಇಂಥಾ ಕಡೆ ಇದ್ದಾರೆ. ಮೊನ್ನೆ 1990ರಲ್ಲಿ ವಿಜ್ಞಾನ, ತಂತ್ರಜ್ಞಾನದ ವಿಭಾಗಗಳಿಗೆ ಮತ್ತಿಬ್ಬರು ಹೆಂಗಸರನ್ನು ತೆಗೆದುಕೊಂಡರು "ವಿಜ್ಞಾನದ ರಂಗದಲ್ಲಿ ಹೆಂಗಸರ ಸಂಖ್ಯೆಯನ್ನು ದ್ವಿಗುಣಗೊಳಿಸಿದ್ದೇವೆ" ಅಂತ ವರದಿ ಕೊಟ್ಟರು. ಇಂಥಾ ಅಂಕಿ-ಸಂಖ್ಯೆಗಳಿಂದ ನಿಜಸ್ಥಿತಿ ತಿಳಿಯೋಲ್ಲ. ಅಷ್ಟೇ ಅಲ್ಲ, ಇಲ್ಲಿ ವಿದೇಶದಲ್ಲಿ ಬಹಳಷ್ಟು ಕಡೆ ಮಹಿಳೆಯರಿಗೆ ಸಂಬಳ ಕಡಿಮೆ ಕೊಡ್ತಾರೆ. ಬಡ್ತಿಯ ಅವಕಾಶಗಳೂ ಬಹಳ ಕಡಿಮೆ, ಒಂದು ಪ್ರೊಫೆಸರ್ ಹುದ್ದೆಗೆ ಏರುವುದೂ ಅಷ್ಟು ಸುಲಭವಲ್ಲ, ಭಾರತದಲ್ಲಿ ನೋಡಿ, ಕಾಲೇಜುಗಳಲ್ಲಿ ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಪ್ರೊಫೆಸರ್‌ಗಳು ಹೇರಳವಾಗಿ ಸಿಗ್ತಾರೆ. ವಿಭಾಗದ ಮುಖ್ಯಸ್ಥರಾಗಿ ದುಡಿದ ಯಥೇಚ್ಛ ಉದಾಹರಣೆಗಳಿವೆ.

ಅಚಲ : ವಿದೇಶಿಯರೇ ಹೆಚ್ಚು ಸಾಂಪ್ರದಾಯಿಕ ಮನೋಭಾವದವರು ಅಂತೀರಿ ?

ಡಾ॥ ನಮೂ : ಹೌದು, ಅದಕ್ಕೆ ಇಲ್ಲಿ ಸ್ತ್ರೀ ಸ್ವಾತಂತ್ರ್ಯ ಚಳುವಳಿ ಇಷ್ಟು ಶಕ್ತವಾಗಿರೋದು. ನಿಜ, ಇಲ್ಲಿ ವರದಕ್ಷಿಣೆ ವಧೂದಹನದಂತಹ ಶೋಷಣೆಗಳಿಲ್ಲ. ಆದರೆ ಬೇರೆ ಬಗೆಯ ತೊಡರುಗಳಿವೆ. ಇದು ಮುಕ್ತ ಲೈಂಗಿಕ ತೆಯ ಸಮಾಜ. ಈ ಮುಕ್ತ ಲೈಂಗಿಕತೆಯಲ್ಲಿ ನರಳುವವರು, ತೊಂದರೆಗೆ ಸಿಕ್ಕಿಕೊಳ್ಳುವವರು ಹುಡುಗಿಯರೇ. ಯೌವ್ವನದ ಭರಾಟೆಯಲ್ಲಿ ಓದಿನ ಮಧ್ಯೆ, ಎಳೆ ವಯಸ್ಸಿಗೇ ಗರ್ಭಿಣಿಯರಾಗುತ್ತಾರೆ. ಬಸಿರು ನಂತರ ಮಗುವಿನ ಹೊರೆ ಹೊರ್ರಾರೆ. ಹುಡುಗ ಜವಾಬ್ದಾರಿಯಿಂದ ಆರಾಮ ಜಾರಿಕೊಳ್ತಾನೆ, ಇಲ್ಲಿ ಗರ್ಭಪಾತ ಕಾನೂನುಬಾಹಿರ ಬೇರೆ.

ಅಚಲ : ಅಂತೂ ಮುಕ್ತ ಲೈಂಗಿಕತೆ ಹುಡುಗಿಯರಿಗೆ ಎಷ್ಟು ದೊಡ್ಡ ಸಮಸ್ಯೆಯಾಗಬಲ್ಲದು ಅಲ್ಲವೆ ?

ಡಾ॥ ನಮೂ : ನೋಡಿ. ತೀರಾ ಚಿಕ್ಕ ವಯಸ್ಸಿನಲ್ಲಿ "ಡೇಟಿಂಗ್" ಪ್ರಾರಂಭವಾಗುತ್ತದೆ. ತಂದೆ-ತಾಯಿ ಮಕ್ಕಳ ನಡುವಿನ ಕೊಂಡಿ ಕಳಚುತ್ತದೆ. ಅತಿ ಚಿಕ್ಕ ವಯಸ್ಸಿಗೆ ವಿವಾಹಕ್ಕೆ ದುಮುಕುತ್ತಾರೆ, ಹೆಚ್ಚು ಹುಡುಗಿಯರು ಹೈಸ್ಕೂಲ್‌ನಿಂದ ಹೊರ ಬರುವಷ್ಟರಲ್ಲಿ ಮದುವೆಯಾಗಿ ಬಿಡ್ತಾರೆ, ಇಲ್ಲಿ ತಂದೆ ತಾಯಿಯ ಒಪ್ಪಿಗೆ ಇದ್ದರೆ 14ಕ್ಕೇ ಕಾನೂನು ರೀತಿ ವಿವಾಹವಾಗಬಹುದು, ಎಳೆ ವಯಸ್ಸಿನ ಮದುವೆಗಳು ಬೇಗ ಮುರಿದು ಬೀಳುತ್ವೆ. ಆಲ್‌ಬರ್ಟಾದಲ್ಲಿ ವಿಚ್ಛೇದನದ ಸಂಖ್ಯೆ ಶೇಕಡಾ ನಲವತ್ತು.

ಅಚಲ : ಅವರ ವಿದ್ಯಾಭ್ಯಾಸದ ಗತಿ ?

ಡಾ॥ ನಮೂ : 16ರವರೆಗೂ ಕಡ್ಡಾಯವಾಗಿ ಪ್ರತಿಯೊಬ್ಬರೂ ಶಾಲೆಗೆ ಹೋಗಬೇಕು. 16 ಆದೊಡನೆ ಬಿಡುವವರೇ ಹೆಚ್ಚು. ಮದುವೆ ಮಾಡಿಕೊಳ್ತಾರೆ, ಮಕ್ಕಳಾಗುತ್ತವೆ, ಮದುವೆ ಮುರಿಯುತ್ತದೆ, ಮಕ್ಕಳೊಡನೆ ಸಿಕ್ಕಿಬಿದ್ದ ಹೆಣ್ಣಿಗೆ ಆರ್ಥಿಕ ಭದ್ರತೆ ಇಲ್ಲ. ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಎಂಥಾ ಕೆಲಸ ಸಿಕ್ಕೀತು ?

ಅಚಲ : ಸ್ತ್ರೀ ಸಂಘ ಸಂಸ್ಥೆಗಳು ಈ ದಿಕ್ಕಿನಲ್ಲಿ ಯಾವ ಪ್ರಯತ್ನವನ್ನೂ ಮಾಡಿಲ್ಲವೆ ?

ಡಾ॥ ನಮೂ ; ನಾವು ಬಹಳಷ್ಟು ಪ್ರಯತ್ನ ಮಾಡುತ್ತಾ ಇರೋದು ಉಂಟು. ಹೈಸ್ಕೂಲು ಹಂತದ ಹುಡುಗಿಯರಿಗೆ ತಿಳಿ ಹೇಳುತ್ತೇವೆ, ಓದು-ಉತ್ತಮ ಉದ್ಯೋಗದ ಅಗತ್ಯದ ತಿಳಿಸಿ ಹೇಳ್ತೇವೆ. ಪ್ರೀತಿ ಪ್ರೇಮ ಹದಿ-ಹರೆಯದಲ್ಲಿ ರಮ್ಯವಾಗಿ ಕಾಣುತ್ತೆ. ಅಷ್ಟೆಲ್ಲಾ ಕುಟುಂಬ ಯೋಜನಾ ವಿಧಾನಗಳ ನಡುವೆಯೂ ಬಸಿರು-ಗುಟ್ಟಾದ ಗರ್ಭಪಾತ ನಡೆಯುತ್ತಲೇ ಸಾಗಿದೆ. ಇವೆಲ್ಲ ನನ್ನ ಅರ್ಥದಲ್ಲಿ ಹೆಚ್ಚು ಕಮ್ಮಿ ಬಾಲ್ಯ ವಿವಾಹಗಳು.

ಅಚಲ ; ತಂದೆ-ತಾಯಿಗಳು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಒತ್ತು ಕೊಡೋಲ್ಲವೆ ?

ಡಾ॥ ನಮೂ ; ಹದಿನಾರು ದಾಟಿದ ಮೇಲೆ ಅವರ ನಿಯಂತ್ರಣ ಹೆಚ್ಚೇನು ಇರೋಲ್ಲ.

ಅಚಲ : ಇಂಥಾ ವಾತಾವರಣದಲ್ಲಿ ಇಲ್ಲಿಂದ ಹೋದ ಭಾರತೀಯರ ಬದುಕು ಯಾವ ರೀತಿ ಮಾರ್ಪಾಟು ಹೊಂದಿದೆ ?

ಡಾ॥ ನವಮೂ : ಇಲ್ಲಿಂದ ಹೋದ ನಮ್ಮಂಥಹ ಭಾರತೀಯರು, ಮೊದಲ ಪೀಳಿಗೆಯವರು. ನಮಗೆ ಭಾರತದ ಕೊಂಡಿಗಳಿನ್ನೂ ಗಟ್ಟಿಯಾಗಿವೆ. ಭಾರತದ ಕುಟುಂಬಗಳು ಒಟ್ಟಿಗೆ ಸೇರುತ್ತವೆ. ಹಬ್ಬ ಹರಿದಿನಗಳನ್ನು ಆಚರಿಸುವ ಭಾರತೀಯ ಸಂಸ್ಕೃತಿ, ಸಂಪ್ರದಾಯಗಳ ಉಳಿಸಿಕೊಳ್ಳಲು ನೋಡ್ತೇವೆ- ನಮ್ಮ ಮಕ್ಕಳ ಮೇಲೆ ಮಮಕಾರ-ನಿಯಂತ್ರಣ ಇನ್ನೂ ಇದೆ. ಆದರೆ ನಮ್ಮ ಮಕ್ಕಳು ಭಾರತದ ಯಾವುದೇ ನಂಟೂ ಇಲ್ಲದೆ ಇಲ್ಲೇ ಹುಟ್ಟಿ ಬೆಳೆದವರು. ಅವರು ಖಂಡಿತಾ ಇಲ್ಲಿಯವರಾಗುತ್ತಾರೆ. ಅಷ್ಟೇ ಅಲ್ಲ, ಇಲ್ಲಿ ನೋಡಿ 16-17ರ ನಂತರ ಮಕ್ಕಳನ್ನು ಆರ್ಥಿಕವಾಗಿ ತಂದೆ-ತಾಯಿಯರು ಬೆಂಬಲಿಸೋದು ಅಪರೂಪ ಹಾಗಾಗಿ ಕೆಲಸ ಹಿಡಿದು ಓದುವ ಹುಡುಗರೇ ಹೆಚ್ಚು. ನಾವು ನೋಡಿ, ನನ್ನ ಮಗ ಪಿ.ಎಚ್.ಡಿ. ಮಾಡಿ ಮುಗಿಸುವವರೆಗೂ ಅವನನ್ನು ಆರ್ಥಿಕವಾಗಿ ಬೆಂಬಲಿಸಿದೆವು. ಆತನಿಗೆ ದುಡಿದು ಕಲಿಯುವ ಭಾರವಿರಲಿಲ್ಲ. ಆದರೆ ನಮ್ಮ ಮಕ್ಕಳ ಜೀವನ ಕ್ರಮ ಹೆಚ್ಚು ಕೆನಡಾದವರಂತೆಯೇ ಆಗುವುದು ಖಂಡಿತಾ ಆಶ್ಚರ್ಯವಲ್ಲ.

ಅಚಲ : ಭಾರತದ ನೆಲದಿಂದ ಅಷ್ಟು ದೂರ ಉಳಿದು ಇಲ್ಲಿಯ ಒಳ್ಳೆಯ ಅಂಶಗಳ ಉಳಿಸಿಕೊಳ್ಳಲು ಹೆಣಗ್ತೀರಾ? ಹಾಗೆಯೇ ಇಲ್ಲಿಯ ಜಾತಿ ವರದಕ್ಷಿಣೆಯಂಥಾ ಕೆಟ್ಟ ಪಿಡುಗುಗಳ ಇಲ್ಲಿಯೇ ಬಿಟ್ಟು ಹೋಗಿದ್ದೀರಾ ?

ಡಾ॥ ನವಮೂ : ಇಷ್ಟು ದೂರ ಬಂದರೂ, ನಮ್ಮವರು ಜಾತಿ-ಕುಲ-ವರದಕ್ಷಿಣೆಗಳು ಖಂಡಿತಾ ಬಿಟ್ಟಿಲ್ಲ. 25 ವರ್ಷದಿಂದ ಇಲ್ಲಿಯೇ ನೆಲೆಸಿದವರು, ಮಗಳ ಮದುವೆಗೆ ತಮ್ಮದೇ ಜಾತಿ-ಒಳ ಪಂಗಡದ ಸಂಬಂಧ ಹುಡುಕುತ್ತಾರೆ, ಅಲ್ಲಿಯ ಕೆಟ್ಟದ್ದನ್ನು ಹೊತ್ತು ತಂದು, ಇಲ್ಲಿಯ ಕೆಟ್ಟದನ್ನೂ ಬಾಚಿಕೊಂಡು ಹಾಳಾದವರಿದ್ದಾರೆ,

ಅಚಲ : ಇಷ್ಟೆಲ್ಲ ಪ್ರತಿಕೂಲ ಪರಿಸ್ಥಿತಿಯಲ್ಲೂ ನಿಮಗೆ ವಿದೇಶದಲ್ಲಿ ಉಳಿಯುವಂತೆ ಮಾಡುವ ಆಕರ್ಷಣೆಗಳೇನು?

ಡಾ॥ ನವಮೂ : ಮೂಲತಃ ನಾವು ಒಂದು ಕಡೆ ಬೇರು ಬಿಟ್ಟ ಮೇಲೆ. ಕಿತ್ತು ನಡೆಯುವುದು ಕಷ್ಟ. ಇಲ್ಲಿ ಒಳ್ಳೆಯ ಅಂಶಗಳೂ ಯಥೇಚ್ಛವಾಗಿವೆ. ಇಲ್ಲಿ ನೋಡಿ "ಮೆರಿಟ್"ಗೆ ಅರ್ಹತೆಗೆ ಬಹಳಷ್ಟು ಆದ್ಯತೆ ಇದೆ. ಹಣದಿಂದ ಸೀಟು-ಕೆಲಸ ಕೊಳ್ಳಲಾರಿರಿ.

ಅಚಲ : ಅಂದರೆ ಡೊನೇಷನ್ ಶಾಲಾ ಕಾಲೇಜುಗಳಿಲ್ಲ.

ಡಾ॥ ನವಮೂ : ಖಂಡಿತಾ ಇಲ್ಲ, ಇಲ್ಲಿ ಬದುಕು ಸುಲಭ, ದಿನನಿತ್ಯದ ಬದುಕಿಗೆ ಹೋರಾಡಬೇಕಿಲ್ಲ, ಅನುಕೂಲಗಳಿವೆ. ನನ್ನ ದೊಡ್ಡ ಮಗ "ಆಸ್ಟ್ರೋ ಫಿಸಿಕ್ಸ್"ನಲ್ಲಿ ಪಿ,ಎಚ್,ಡಿ. ಮಾಡಿದ. ಎರಡನೆಯವನು ವೈದ್ಯ ರಂಗದಲ್ಲಿದ್ದಾನೆ. ನಾವು ಅವರಿಗೋಸ್ಕರ ಒಂದು ಕಾಸೂ ಖರ್ಚು ಮಾಡಬೇಕಾಗಲಿಲ್ಲ, ಇಬ್ಬರಿಗೂ ಮೆರಿಟ್ ಇತ್ತು. ಓದಿಕೊಂಡು ಬಂದರು, ಭ್ರಷ್ಟಾಚಾರ ತೀರಾ ಕಡಿಮೆ. ಹಾಗಾಗಿ ದಿನ ದಿನದ ಬದುಕು ಸುಖವಾಗಿದೆ.

ಅಚಲ : ಇಷ್ಟು ಅವಕಾಶಗಳಿದ್ದೂ ಹುಡುಗಿಯರು ಹೆಚ್ಚಿನ ವಿದ್ಯಾಭ್ಯಾಸಕ್ಕೆ ನುಗ್ಗೋಲ್ಲ.

ಡಾ॥ ನವಮೂ : ಇಲ್ಲಿ ಬದುಕು ಬಹಳ ವೇಗವಾಗಿ ಮುನ್ನುಗ್ಗುತ್ತದೆ, ಹೆಣ್ಣು ಇವುಗಳ ಫಲವಾಗಿ ಬಸಿರು-ಗರ್ಭಪಾತ ಮಕ್ಕಳು ಈ ಸುಳಿಯಲ್ಲಿ ಸಿಕ್ಕಿ ಬೀಳ್ತಾಳೆ, ವಿವಾಹೇತರ ಮಗು ಎಂಬ ಸಾಮಾಜಿಕ ಕಳಂಕ ಇಲ್ಲೇನು

ಇಲ್ಲ, ವಿವಾಹದ ಹೊರಗಾಗಲೀ–ಒಳಗಾಗಲಿ ಹುಡುಗಿಯರು ಮಕ್ಕಳನ್ನು ಉಳಿಸಿಕೊಳ್ಳುತ್ತಾರೆ. ಮಕ್ಕಳು ದೊಡ್ಡವರಾಗುವವರೆಗೂ ಅವಳನ್ನು ಕಟ್ಟಿಹಾಕಿದಂತೆಯೇ ಆಕೆಯ ಯೌವ್ವನದ ವಿದ್ಯಾಭ್ಯಾಸದ ಕಾಲ ಹೀಗೆ ಮುಗಿದು ಹೋಗುತ್ತೆ. ಮತ್ತೆ 25ಕ್ಕೊ 30ಕ್ಕೊ ಕೆಲಸ ಹುಡುಕಿ ಹೊರಟಾಗ ತಡವಾಗಿರುತ್ತದೆ. ಬರೀ 17–18ರಹುಡುಗಿಯರು. ಕೆಲಸ–ಆರ್ಥಿಕ ಬೆಂಬಲವಿಲ್ಲದೆ ಮಗು ಹೆರುತ್ತಾರೆ ಸರ್ಕಾರ "ವೆಲ್‌ಫೇರ್" ಅಂತ ಹಣ ಕೊಡುತ್ತದೆ. ತಲೆಯ ಮೇಲೊಂದು ಸೂರು, ಒಂದು ಹೊತ್ತಿನ ಊಟಕ್ಕೆ ತೊಂದರೆ ಇಲ್ಲ. ಆದರೆ ಈ ಸುಳಿಯಿಂದ ಹೊರಬರುವ ಅವಕಾಶಗಳೇ ಆಕೆಗಿರೋಲ್ಲ. ವಿದ್ಯಾಭ್ಯಾಸವಿಲ್ಲದೆ, ತಂದೆ ತಾಯಿಗಳ ಬೆಂಬಲವಿಲ್ಲದೆ ಮಗು ಕಟ್ಟಿಕೊಂಡು ಒದ್ದಾಡ್ತಾರೆ. ಮಗುವನ್ನು ಬಿಟ್ಟು ಕೆಲಸಕ್ಕೆ ಹೋಗುವುದೂ ಕಷ್ಟ. ಕೆಲಸ ಹಿಡಿದರೆ "ವೆಲ್‌ಫೇರ್" ಕಟ್ ಆಗುತ್ತೆ.

ಅಚಲ ; ಬೇಬಿ ಸಿಟ್ಟಿಂಗ್ ವ್ಯವಸ್ಥೆ ಬಹಳ ಇರಬೇಕಲ್ಲವೇ ?

ಡಾ॥ ನಮೂ ; ಇಲ್ಲಿ "ಡೇ ಕೇರ್ ಸೆಂಟರ್"ಗಳು ಬಹಳ ದುಬಾರಿ 300-500 ಡಾಲರ್ ಕೊಡಬೇಕಾಗುತ್ತೆ ತಿಂಗಳಿಗೆ ಒಬ್ಬ ಸಾಮಾನ್ಯ ಗುಮಾಸ್ತ ಹುದ್ದೆಗೆ ಸಂಬಳ 1700_2000 ಡಾಲರ್ ಇರುತ್ತೆ, ಅಷ್ಟರಲ್ಲಿ 300 500 ಕೊಡುವುದ್ಹೇಗೆ ?

ಅಚಲ : ಒಟ್ಟಿನಲ್ಲಿ ಸ್ತ್ರೀಯರ ಹೆರುವ ದೈಹಿಕ ಪ್ರಕ್ರಿಯೆಯೇ ಅವಳಿಗೆ ಮುಳುವಾಗಿದೆ. ಬಹುಶಃ ಇದೇ ಕಾರಣಕ್ಕೆ ಆಕೆ ಹೆಚ್ಚು ಜಾಗರೂಕವಾಗುವುದು ಅವಶ್ಯಕ.

ಡಾ॥ ನಮೂ : ನಿಜ, ಆದರೂ ಇಲ್ಲಿ ಹುಡುಗಿಯರೂ ನೋಡಿ. ಯಾರಾದ್ರೂ ಹೈಸ್ಕೂಲ್ ಹುಡುಗೀನ "ನೀ ಮುಂದೆ ಏನಾಗ್ತೀಯಮ್ಮಾ" ಅಂದರೆ "I want to be a Mother" ಅನ್ನುತ್ತಾಳೆ. ಬದುಕಿನ ಸಹಜ ಕ್ರಿಯೆಗಳೇ ದೊಡ್ಡ ಸಾಧನೆ ಎಂಬಂತೆ. ಹೆಚ್ಚು ಅಂದರೆ "ನಾನು ನರ್ಸ್ ಆಗ್ತೀನಿ, ಟೀಚರ್ ಆಗ್ತೀನಿ" ಅನ್ನೋದುಂಟು. ಅವರಲ್ಲಿ ಮಹತ್ವಾಕಾಂಕ್ಷೆ ತುಂಬಬೇಕಿದೆ.

ಅಚಲ : ಸ್ತ್ರೀ ಚಳುವಳಿ ಏನು ಮಾಡ್ತಾ ಇದೆ ?

ಡಾ॥ ನಮೂ : ಸ್ತ್ರೀ ಚಳುವಳಿ ತಪ್ಪು ಹೆಜ್ಜೆಯಲ್ಲಿ ಆರಂಭವಾಯಿತು. "ಹೆಂಗಸರು ಮನೆಯಿಂದಾಚೆ ಬರಬೇಕು ಮಕ್ಕಳನ್ನು ಹೆರಬಾರದು" ಎಂಬ ತೀರ ವಿಪರೀತದ ವಾದದಿಂದ ಶುರುವಾಯಿತು. ಸ್ತ್ರೀವಾದವನ್ನು ಸಾಮಾಜಿಕ ಚೌಕಟ್ಟಿನೊಳಗೇ ಒತ್ತಿ ಹೇಳಬೇಕಿತ್ತು, ಸಮಾನ ಉದ್ಯೋಗ ಅವಕಾಶ, ಸಮಾನ ಸಂಬಳ ಎಂದೆಲ್ಲ ದುಡಿದಿದ್ದರೆ ಯಶಸ್ವಿಯಾಗುತ್ತಿತ್ತು, ಅದು ಕೇವಲ ಪುರುಷ ವಿರೋಧಿ ಚಳುವಳಿಯಾಗಿ ಸೋತಿತು.

ಅಚಲ : ಸ್ತ್ರೀ ಚಳುವಳಿ ಈಗ ಯಾವ ರೂಪ ಪಡೆದಿದೆ ?

ಡಾ॥ ನಮೂ : ಒಂದು ರೀತಿಯಲ್ಲಿ ತಟಸ್ಥವಾಗಿದೆ, ಸಾಲದಕ್ಕೆ ಅಮೇರಿಕೆಯಲ್ಲಿ ಕೆಲವು "ನಿಜವಾದ ಹೆಂಗಸರು" ಎಂಬ ಗುಂಪುಗಳೂ ಆರಂಭವಾಗಿದೆ", ಹೆಣ್ಣಿನ ನಿಜವಾದ ಕರ್ತವ್ಯ ಕುಟುಂಬವನ್ನು ನೋಡಿಕೊಳ್ಳುವುದು, ಗಂಡ ಮಕ್ಕಳಿಗಾಗಿ ಬದುಕುವುದು ಗಂಡ ಬಂದೊಡನೆ ಆತನ ಬೂಟ್ಸ್ ತೆಗೆದು, ಮುಗುಳ್ನಗುತ್ತಾ ಪಾನೀಯ ನೀಡಿ, ಅಂತಾ ಬೋಧಿಸುವ ಗುಂಪುಗಳು, ತಮಾಷೆ ಅಂದರೆ ಇದನ್ನೆಲ್ಲ ಪ್ರಾರಂಭಿಸಿದ ಫಿಲಿಪ್ ಶಾಫಲೆ ದೇಶದುದ್ದಕ್ಕೂ ಭಾಷಣ ಬಿಗಿಯುವುದರಲ್ಲಿ ಎಷ್ಟು ಬಿಜಿ ಇದ್ದಾಳೆ ಅಂದರೆ, ಆಕೆಯ ಕುಟುಂಬಕ್ಕೆ ಎಷ್ಟು ಸಮಯ ನೀಡ್ತಾಳೆ, ಆಕೆಯೇ ಹೇಳಬೇಕು. ಆದರೂ ಈ ಚಳುವಳಿ ಶಕ್ತವಾಗಿದೆ, ಸರ್ಕಾರದಿಂದ ಸಾಕಷ್ಟು ಹಣ ಅವರಿಗೆ ದೊರೆಯುತ್ತೆ. ಈ ಬಗೆಯ ಹುಚ್ಚು ವಾದಗಳಲ್ಲಿ ನಿಜವಾದ ಸ್ತ್ರೀವಾದ ಕೊರಗ್ತಾ ಇದೆ. ಎಷ್ಟೊಂದು ಸ್ತ್ರೀ ಸಮಸ್ಯೆಗಳಿವೆ, ಸಮಾನ ಉದ್ಯೋಗಾವಕಾಶಕ್ಕೆ, ಸಮಾನ

ಸಂಬಳಕ್ಕೆ ಹೋರಾಡಬೇಕಿದೆ. ಇಲ್ಲಿ ನರ್ಸಿಂಗ್, ಟೀಚಿಂಗ್‌ನಂಥಾ ಸ್ತ್ರೀ ಪ್ರಧಾನ ಕೆಲಸಗಳಿಗೆ ಕಡಿಮೆ ಸಂಬಳ. ಹೆಂಗಸರ ಮೇಲಿನ ದೌರ್ಜನ್ಯ ಬಹಳಷ್ಟು ಇದೆ. ಇಲ್ಲಿ ಸರ್ಕಾರ ಎಷ್ಟೋ "ರಕ್ಷಣಾ ಗೃಹ"ಗಳನ್ನು ಒದಗಿಸಿದರೂ ಗಂಡನಿಂದ ಬಡಿಸಿಕೊಂಡು ನರಳುವ ಹೆಂಗಸರೂ ಯಥೇಚ್ಛವಾಗಿದ್ದಾರೆ.

ಅಚಲ : ಕಾನೂನು ಯಾವ ಕ್ರಮವನ್ನು ತೆಗೆದುಕೊಳ್ಳುವುದಿಲ್ಲವೇ ?

ಡಾ|| ನವಮೂ : ಕಾನೂನು ಕ್ರಮ ತೆಗೆದುಕೊಳ್ಳಲು ಯಾರಾದರೂ ದೂರು ನೀಡಬೇಕು. ಯಾರು ಬೇಕಾದರೂ ಇಲ್ಲಿ ನೀಡಬಹುದು. ನಮ್ಮ ಪಕ್ಕದ ಮನೆಯಾತ ಪತ್ನಿಯ ಬಡಿಯುತ್ತಿದ್ದರೆ ನಾನು ದೂರು ಕೊಡಬಹುದು. ದ್ವಿಪತ್ನಿತ್ವದ ಕೇಸ್‌ನಲ್ಲೂ ಕೂಡಾ, ಹೆಂಡತಿಯೇ ದೂರು ಕೊಡಬೇಕೆಂದಿಲ್ಲ. ಯಾರು ಬೇಕಾದರೂ ಕೇಸ್ ಫೈಲ್ ಮಾಡಬಹುದು. ನಾನು ನನ್ನ ಹೆಸರಿನಲ್ಲೇ ದೂರು ಕೊಡಲು ಇಚ್ಛಿಸದೆ ಇರಬಹುದು. ಆಗ ಒಂದು ಫೋನ್ ಮೂಲಕ ತಿಳಿಸಿದರೆ, ಪೋಲೀಸ್ ಬಂದು. ಪುರಾವೆಗಳು ಸಿಕ್ಕರೆ ಅವರೇ ಕೇಸ್ ಫೈಲ್ ಮಾಡುತ್ತಾರೆ.

ಅಚಲ ; ಇದಂತೂ ತುಂಬಾನೆ ಉತ್ತಮ ಸುಧಾರಣೆ. ಅಲ್ಲಿ ಕಾನೂನಿನ ಭ್ರಷ್ಟಾಚಾರಗಳಿಲ್ಲವೆ ?

ಡಾ|| ನವಮೂ : ಜನ ಸಾಮಾನ್ಯರ ನಿತ್ಯ ಬದುಕಲ್ಲಿ ಭ್ರಷ್ಟಾಚಾರ ಇಲ್ಲವೇ ಇಲ್ಲ ಅನ್ನಬಹುದು. ಶಾಲೆಗೆ ಸೇರಿಸಲು ಕೆಲಸ ಗಳಿಸಲು ಲಂಚ ಕೊಡಬೇಕಿಲ್ಲ. ಮಕ್ಕಳಿಗೆ ನಾವು ಪುಸ್ತಕ ಕೂಡ ಕೊಂಡು ಕೊಡಬೇಕಿಲ್ಲ. ಮಕ್ಕಳಿಗೆ ಪೇಪರ್‌ಗಳನ್ನು, ಫೈಲ್‌ಗಳನ್ನು ತಳ್ಳಲು ಲಂಚ ಬೇಕಿಲ್ಲ, ನಾವು ಮೊನ್ನೆ ಇಲ್ಲಿ ಮನೆ ಕೊಂಡಾಗ, ಇಡೀ ಕಾಗದ ಪತ್ರಗಳು ವಾರದಲ್ಲಿ ಸಹಿ ಆಗಿ ನನ್ನ ಕೈ ಸೇರಿದವು. ಇಲ್ಲಿ ಶಾಲೆಗಳು-ಆಸ್ಪತ್ರೆಗಳು ಅದ್ಭುತವಾಗಿವೆ.

ಅಚಲ : ಕಾರ್ ಶೆಡ್ಡಿನಲ್ಲಿ ನಡೆಸೋ ಶಾಲೆಗಳಿವೆ ನಮ್ಮ ಬೆಂಗಳೂರಲ್ಲಿ.

ಡಾ|| ನವಮೂ : ಇಲ್ಲಿ ಅದು ಸಾಧ್ಯವೇ ಇಲ್ಲ. ಪ್ರತಿ ಶಾಲೆಯಲ್ಲಿ ಆಟದ ಜಾಗ ಇರಬೇಕು, ಗ್ರಂಥಾಲಯ ಇರಬೇಕು, "ಜಿಮ್" ಇರಬೇಕು. "ಡೇ ಕೇರ್ ಸೆಂಟರ್" ಆದರೂ ಅಷ್ಟೆ,—ಲೈಸೆನ್ಸ್ ತಗೋಬೇಕು, ಸಾಕಷ್ಟು ಶೌಚದ ವ್ಯವಸ್ಥೆ ಇರಬೇಕು. ಸುರಕ್ಷಿತವಾಗಿರಬೇಕು, ಆಡುವ ಜಾಗ ಇರಬೇಕು, ಸಂಪರ್ಕಿಸಲು ವೈದ್ಯರ ನಂಬರ್ ಇರಬೇಕು.

ಅಚಲ : ಅಂತೂ ಅವರ ಸಂಸ್ಕೃತಿಯಿಂದ ನಾವು ಕಲಿಯುವುದೂ ಬಹಳಷ್ಟಿದೆ, ನಮ್ಮ ಸಂಸ್ಕೃತಿಯ ಒಳ್ಳೆಯ ಅಂಶಗಳನ್ನು ಉಳಿಸಿಕೊಳ್ಳಬೇಕಾದ್ದೂ ಇದೆ,

ಡಾ|| ನವಮೂ : ಖಂಡಿತಾ ಇಲ್ಲಿ ಭಾರತೀಯರಲ್ಲಿ ನೋಡಿ ಕುಟುಂಬ ವ್ಯವಸ್ಥೆ ಇನ್ನೂ ಗಟ್ಟಿಯಾಗಿದೆ. ಉದ್ಯೋಗಸ್ಥ ಮಹಿಳೆ ಒಬ್ಬಂಟಿಗಳಾಗಿ ನರಳಬೇಕಿಲ್ಲ, ಒಂದಿಷ್ಟು ಅಪ್ಪ-ಅಪ್ಪ .ಅತ್ತೆ—ಮಾವ, ಅಕ್ಕನೋ—ತಂಗಿಯೋ ನೆಂಟರೋ ಸಮಯಕ್ಕೆ ಒದಗಿ ಬರುವುದಿದೆ. ಗಂಡಂದಿರೂ ಮನೆಗೆಲಸದಲ್ಲಿ ಇತ್ತೀಚೆಗೆ ಒಂದಿಷ್ಟು ಸಹಾಯಕರಾಗಿದ್ದಾರೆ. ನಮ್ಮ ಪೀಳಿಗೆಯ ನಾವು ವಿದೇಶಕ್ಕೆ ಹೋದಾಗ ಪತಿಯ ನೆರವನ್ನು ನಿರೀಕ್ಷಿಸುವಷ್ಟು, ಹಕ್ಕಿನಂತೆ ಪಡೆಯುವಷ್ಟು ಜಾಗ್ರತರಾಗಿರಲಿಲ್ಲ, ಮನೆ—ಮಕ್ಕಳು ಹೆಂಗಸರ ಜವಾಬ್ದಾರಿ ಒಪ್ಪಿಕೊಂಡು ಹೊರಗೂ ಒಳಗೂ-ದುಡಿಯುತ್ತಿದ್ದೆವು· ವಿದೇಶಕ್ಕೆ ಹೋಗಿ ಅಮ್ಮ ಅತ್ತೆಯರ ನೆರವೂ ನೆರಳೂ ಇಲ್ಲದಾಗಿತ್ತು, ಈಗಿನ ಹುಡುಗಿಯರು ಹೆಚ್ಚು "Assertive" ಆಗಿದ್ದಾರೆ. ಅದು ನಿಜಕ್ಕೂ ಸಂತೋಷದ ವಿಷಯ,

ಅಚಲ : ನಿಮ್ಮ ಅನಿಸಿಕೆ-ಅನುಭವಗಳ "ಅಚಲ"ದೊಂದಿಗೆ ಹಂಚಿಕೊಂಡಿರಿ, ತುಂಬಾ ದನ್ಯವಾದಗಳು, ನಮಸ್ತೆ.

ಡಾ|| ನವಮೂ ; ನಮಸ್ತೆ.

☐ ನೇಮಿಚಂದ್ರ

# —○○— ಕಥೆ —○○—

## ಅವಳ ಭಾಗ್ಯ

❋ ಕೊಡಗಿನ ಗೌರಮ್ಮ

> ಚಾರಿತ್ರಿಕವಾಗಿ ಹಾಗೂ ವ್ಯಕ್ತಿಗತ ಪ್ರತಿಭೆಯಿಂದಾಗಿ ಕನ್ನಡ ಕಥಾ ಸಾಹಿತ್ಯ ಪರಂಪರೆಯಲ್ಲಿ ಮಾಸದ ಸ್ಥಾನ ಪಡೆದಿರುವ ಲೇಖಕಿ ಕೊಡಗಿನ ಗೌರಮ್ಮ. ತಮ್ಮ ಇಪ್ಪತ್ತೆಂಟನೇ ವಯಸ್ಸಿನಲ್ಲಿ ನದಿಯಲ್ಲಿ ಈಜಲು ಹೋಗಿ ಬದುಕನ್ನೇ ಕೊನೆಗೊಳಿಸಿಕೊಂಡ ಕೊಡಗಿನ ಗೌರಮ್ಮ ಬಿಟ್ಟು ಹೋದ ಎರಡು ಹೆಜ್ಜೆ ಗುರುತು "ಕಂಬನಿ" ಮತ್ತು "ಚಿಗುರು". ಗೌರಮ್ಮ ಬರೆದದ್ದು 1931ರಿಂದ 39ರವರೆಗೆ ಇವರ "ಕಂಬನಿ" ಮತ್ತು "ಚಿಗುರು" ಕಥಾ ಸಂಕಲನದಿಂದ ಆಯ್ದ ಕಥೆ ಇದು.

ಮದುವೆಯೇ ಬೇಡವೆನ್ನುತ್ತಿದ್ದ ಕಿಟ್ಟಣ್ಣ ಆ ಹಳ್ಳಿಯ ಜಮೀನ್ದಾರರ ಮಗಳನ್ನು ಮದುವೆಯಾಗಲೊಪ್ಪಿದ್ದೇ ತಡ–ಒಮ್ಮೆ ಕಿಟ್ಟು ಮದುವೆಮಾಡಿಕೊಂಡು ಸಂಸಾರ ಹೂಡಿದರೆ ಸಾಕು ಎಂದಿದ್ದ ಅಣ್ಣನೂ ಒಪ್ಪಿದ. ಎಲ್ಲ ಸಿದ್ಧತೆಗಳೂ ಭರದಿಂದ ನಡೆದವು. ಹಾಂ, ಹುಂ-ಎನ್ನುವುದರೊಳಗೆ ಮದುವೆಯೂ ಆಗಿಹೋಯ್ತು, ನಾನೀಗ ಹೇಳಬೇಕೆಂದಿರುವುದು ಆ ಮದುವೆಯ ಸಮಯದ ಸಮಾಚಾರ,

ಕಿಟ್ಟಣ್ಣನೂ ಅವನ ಹೆಂಡತಿಯೂ ಆರತಿ ಅಕ್ಷತೆಗೆ ಹಸೆಯ ಮೇಲೆ ಕೂತಿದ್ದರು. ಹಿಂದಿನ ದಿನದ ಮದುವೆಯ ಗಲಾಟೆಯಲ್ಲಿ ವಧೂ-ವರರನ್ನು ಸರಿಯಾಗಿ ನೋಡಿ ಹಾಸ್ಯ ಮಾಡಲು ಯಾರಿಗೂ ಸಮಯವಾಗಲೀ ಸಾಹಸವಾಗಲೀ ಇರಲಿಲ್ಲ. ಆದರೆ ಮರು ದಿನ ಅರಿಸಿನ-ಎಣ್ಣೆಗೆ ಕೂರಿಸಿದಾಗ ಹೆಂಗಸರಿಗೇ ತಾನೇ ಸರ್ವ ಸ್ವಾತಂತ್ರ್ಯ ! ಅಂದು ಊರಿನ ಮುತ್ತೈದೆಯರೆಲ್ಲಾ ಹಾಜರಾಗಿದ್ದರು, ಎಂದೂ ಅಷ್ಟೊಂದು ಜನ ಹೆಂಗಸರ ನೋಟಕ್ಕೆ–ಅವರ ಹುಚ್ಚು ಹಾಸ್ಯಕ್ಕೆ ಗುರಿಯಾಗದಿದ್ದ ಕಿಟ್ಟಣ್ಣನಿಗೆ ಆಗ "ಸಾಕಪ್ಪ, ಮದುವೆಯ ಸುಖಸಾಕು ಎನಿಸಿರಬೇಕು ನನ್ನನ್ನು ಕೂಗಿ ಹೇಗಾದರೂ ಈ Ordeal ಒಂದ್ಸಾರಿ ಮುಗಿಸೋದಕ್ಕೆ ಹೇಳು" ಎಂದ. ಆದರೆ ಆ ಸ್ತ್ರೀ ರಾಜ್ಯದಲ್ಲಿ ಅವನ ಮಾತಿಗೆಲ್ಲಿ ಬೆಲೆ ದೊರೆಯ ಬೇಕು ?

"ಜಯ, ನೀ ಒಂದು ಹಾಡು ಹೇಳೆ" ಎಂದು, "ನನಗೆ ಬರೋಲ್ಲ" ಎಂದು ಬಿಂಕ ಮಾಡುತ್ತಿದ್ದ ಜಯನನ್ನು ಬಲಾತ್ಕರಿಸಿ ಹಾಡಿಸಿದ್ದಾಯಿತು. ಕೂತು ಬೇಸತ್ತಿದ್ದ ಕಿಟ್ಟಣ್ಣ ಅವಳ ಕರ್ಕಶ ಕಂಠದಿಂದ ಹೊರಟ ಕರ್ಣಕಠೋರ ಸ್ವರವನ್ನು ಹೇಗೆ ಸಹಿಸಿಕೊಂಡನೋ ತಿಳಿಯದು. ಹೇಗೂ ಅವಳ ಹಾಡು ಮುಗಿಯಿತು. ಇನ್ನೇನು ಬದುಕಿದೆ ಎಂದು ಕೊಂಡ, ಆದರೆ ಒಂದೇ ಒಂದು ಹಾಡು ಹೇಳಿ ಅರಿಸಿನೆಣ್ಣೆ ಮುಗಿಸುವುದೇ ? ಛೇ, ಎಂದಿಗೂ ಇಲ್ಲ–ಕಮ್ಮಿ ಪಕ್ಷ ಹತ್ತಿಪ್ಪತ್ತಾದರೂ ಹೇಳಬೇಡವೇ ?

ಆಗಲಿ ಎಷ್ಟಾದರೂ ಹಾಡಿಕೊಳ್ಳಲಿ, ಆದರೆ ಬೇಗ ಬೇಗ ಹೇಳಿ ಮುಗಿಸಿಬಿಡಬಾರದೇ ? "ಹೇಳೀಂದ್ರೆ–ನೀವೇ ಹೇಳೀಂದ್ರೆ–ನೀವ್ಹೇಳೀಂದ್ರೆ" ಎಂದು ಹತ್ತಾರು ಸಾರಿ ಹೇಳಿಸಿಕೊಂಡು, ನನಗೆ ಗಂಟಲು ಸರಿಯಾಗಿಲ್ಲ_ಎಂದು ಬೇರೆ ವೈಯ್ಯಾರ ಮಾಡಿ. ಆಮೇಲೆ ಹಾಡಲು (ಅರಚಲು) ಪ್ರಾರಂಭಿಸಿದರೆ ಗಂಟೆ ಒಂದಾದರೂ ಆದಕ್ಕೆ ಅಂತ್ಯವೇ ಇಲ್ಲ,

ಕಿಟ್ಟಣ್ಣ "ಗಂಟಲು ಸರಿಯಿಲ್ಲದೇನೇ ಇಷ್ಟೊಂದು ಹೊತ್ತು ಅರಚುವಾಗ ಸರಿಯಿದ್ದರೆ ದೇವರೇ ಗತಿ" ಎಂದಂದುಕೊಂಡ ಅಂತೂ ಕೊನೆಗೆ ಹೇಗಾದರೂ ಎಲ್ಲರ ಹಾಡುಗಾರಿಕೆಯೂ ಮುಗಿಯಿತು. ಇನ್ನು ಆರತಿ ಮಾಡಿ ಬಿಡುಗಡೆ ಮಾಡಬಹುದು ಎಂದು ಕಿಟ್ಟಣ್ಣ ನೆಟ್ಟಗೆ ಕೂತ. ಆದರೆ ಅದು ಕೇವಲ ಒಂದೆರಡು ನಿಮಿಷದ ಆಸೆ ಅಷ್ಟೆ. ಮುತ್ತೈದೆಯರಿಬ್ಬರೂ ಆರತಿಯನ್ನು ಹಿಡಿದುಕೊಂಡು ಇದಿರು ಬಂದು ನಿಂತು ಪುನಃ ಪ್ರಾರಂಭಿಸಿದರು-"ಆರತಿ ಎತ್ತಿದ ಹಾಡು ನೀವೆ ಹೇಳಿ ನೀವೇ ಹೇಳಿ" ಎಂದು ತಮ್ಮ ತಮ್ಮೊಳಗೇ ವಾದಕ್ಕೆ. ಅವರಿಬ್ಬರ ವಾದ ಕಮ್ಮಿ ಪಕ್ಷ ಒಂದು ಗಂಟೆಯತನಕವಾದರೂ ನಡೆಯುತ್ತಿತ್ತೇನೋ ! ಆದರೆ ನೋಡಿ ಬೇಸತ್ತ ಕಿಟ್ಟಣ್ಣ ನನ್ನ ಹತ್ತಿರ ಕೂತಿದ್ದ ಹುಡುಗಿಯೊಬ್ಬಳನ್ನು ನೋಡಿ "ಹೋಗಲಿ ಅವರಿಗೆ ಬರದಿದ್ದರೆ ಪರವಾ ಇಲ್ಲ-ನೀನಾದರೂ ಒಂದು ಹೇಳಮ್ಮಾ" ಎಂದ. ಕಿಟ್ಟಣ್ಣ ಆ ಮಾತುಗಳ ನ್ನಾಡಿದ್ದು, ಬೆಪ್ಪೆ ಮೂರ್ತಿವಂತವಾಗಿದ್ದಂತೆ ಕುಳಿತಿದ್ದ ಆ ಹುಡುಗಿಯಾದರೂ ಕಿರುಚಿ ಇವರ ವಾದವನ್ನು ಕೊನೆ ಗೊಳಿಸಲಿ ಎಂದು, ನನಗೂ ಕಿಟ್ಟಣ್ಣನ ಮಾತು ಕೇಳಿ ನಗು ಬಂತು. ಆ ಹುಡುಗಿ ಹಾಡುವುದೇ ! ಇಷ್ಟು ಹೊತ್ತು ಹಾಡಿದವರ ಪಾಡೇ ಹೀಗೆ-ಇವಳು........

ಹುಡುಗಿ ಹದಿನೈದು ವರ್ಷದ ಪ್ರಾಯದವಳು. ಆದರೆ ಬೆಳವಣಿಗೆಯನ್ನು ನೋಡಿದರೆ ಪ್ರಾಯ ಇನ್ನು ಹೆಚ್ಚಾಗಿದೆ ಎನ್ನುವಂತಿದ್ದಳು. ಇದ್ದಲಿನಂತೆ ಮೈ ಬಣ್ಣ. ಒಂದೆರಡು ತಿಂಗಳ ಹಿಂದೆ ಖಾಯಿಲೆ ಬಿದ್ದಿದ್ದಳಂತೆ-ತಲೆ ಕೂದಲೆಲ್ಲಾ ಉದುರಿ ಆಗ ತಾನೇ ಪುನಃ ಬರಲು ಪ್ರಾರಂಭವಾಗಿತ್ತಷ್ಟೇ. ಚಪ್ಪಟೆ ಮೂಗು. ಇನ್ನು ಕಣ್ಣು ? ಯಾವಾಗಲೂ ರೆಪ್ಪೆಗಳ ಅಡಿಯಲ್ಲೇ ಅಡಗಿಕೊಂಡಿರುತ್ತಿದ್ದ ಅವಳ ಕಣ್ಣುಗಳನ್ನು ನಾನೂ ನೋಡಿರಲಿಲ್ಲ, ಆದರೂ ಅವುಗಳನ್ನು ಮುಚ್ಚಿಕೊಂಡಿದ್ದ ಉದ್ದವಾದ ರೆಪ್ಪೆಗಳನ್ನು ನೋಡಿ ಈ ಅವಲಕ್ಷಣದ ಮುಖಕ್ಕೆ ಇಷ್ಟೊಂದು ಸೊಗಸಾದ ರೆಪ್ಪೆ ಏಕೆ ? ಎಂದೆನಿಸಿತ್ತು ನನಗೆ, ಕಿಟ್ಟಣ್ಣನ ಮಾವನ ಗುಮಾಸ್ತರ ಮಗಳವಳು, ಬಡತನವೂ ಆ ಕುರೂಪವೂ ಜೊತೆಯಾಗಿ ಅವಳಿಗೆ ವರ ಸಿಕ್ಕದಂತೆ ಮಾಡಿದ್ದವು. ಎಲ್ಲರಿಗೂ ಅವಳೆಂದರೆ ಅಷ್ಟಷ್ಟೆ. "ಪಾರೂ ಅದು ಮಾಡೆ, ಇದು ಮಾಡೆ" ಎಂದು ಕೆಲಸ ಮಾಡಿಸುವವರೇ ಎಲ್ಲರೂ. ಅವಳಿಗೂ ಕೆಲಸವೆಂದರೆ ಬೇಸರವಿದ್ದಂತೆ ತೋರಲಿಲ್ಲ, ನಾವು ಅಲ್ಲಿಗೆ ಹೋದಂದಿನಿಂದ ನನ್ನ ಹಿಂದೆ ಮುಂದೆ ತಿರುಗಹತ್ತಿದ್ದಳು, ರಸ್ತೆಯಲ್ಲಿ ಹೋಗುವ ನಾಯಿಯು ತಲೆಸವರಿದರೆ ಬೆನ್ನು ಹತ್ತುತ್ತದಲ್ಲ ಹಾಗೆ, ಅದಕ್ಕೆ ಕಾರಣವಿಷ್ಟೆ ನಾವು ಹೋದ ದಿನ ಯಾರ ಪರಿಚಯವೂ ಇಲ್ಲದಿದ್ದ ನಾನು, ಅವಳೊಡನೆ ಒಂದೆರಡು ಮಾತಾಡಿದ್ದೆ. ಸರಿ, ಒಳ್ಳೆಯ ಮಾತುಗಳನ್ನು ಕೇಳುವುದೇ ಅಪರೂಪವಾಗಿದ್ದ ಅವಳನ್ನೊಲಿಸಿಕೊಳ್ಳಲು ಅಷ್ಟೇ ಸಾಕಾಗಿತ್ತು. ನನಗೆ ಬೇಕಾದುದನ್ನು ಒಳಗಿನಿಂದ ತರುವುದು; ಹಿಂದೆ ಮುಂದೆ ತಿರುಗುವುದು; ನಾನು ಕೂತಲ್ಲಿ ಕೂಡುವುದು-ಹೀಗೆ ಒಂದಲ್ಲ. ನೂರು ವಿಧಗಳಲ್ಲಿ ಅವಳು ತನ್ನೊಲುಮೆಯನ್ನು ಪ್ರದರ್ಶಿಸುತ್ತಿದ್ದಳು, ಅವಳ ತಂದೆ ಪಾಪ ಮುದುಕರು ಅವಳನ್ನು ನೋಡಿ "ಏನಮ್ಮಾ. ಪಾರೂ, ಅವರ ಜೊತೇಲೆ ಅವರೂರಿಗೆ ಹೊರಟು ಹೋಗ್ತೀಯಾ ?" ಎಂದು ತಮಾಷೆ ಮಾಡುವರು, ಆಗೊಮ್ಮೆ ಅವಳು ಹಲ್ಲು ಕಿರಿದರೆ ಆ ಕರೀ ಮುಖದಲ್ಲಿ ಬಿಳೀ ಹಲ್ಲುಗಳ ಸಾಲು ಒಡೆದು ಕಾಣುವುದು...."

ಕಿಟ್ಟಣ್ಣ ಅವಳೊಡನೆ ಹಾಡಲು ಹೇಳಿದ, ನಾನೂ ಅವನ ಮನೋಭಾವವರಿತು "ಹೇಳಮ್ಮಾ ಪಾರೂ" ಎಂದೆ. ನನ್ನ ಮಾತು ಮೀರುವಂತಿಲ್ಲ. "ನನಗೆ ಆರತಿ ಎತ್ತೋ ಹಾಡು ಬರೋದಿಲ್ಲ ಬೇರೆ ಹೇಳಲೇ ?" ಎಂದಳು, ನಾನೆಲ್ಲಿ ಬೇಡವೆನ್ನುವೆನೋ ಎಂದು ಕಿಟ್ಟಣ್ಣ "ಪರವಾ ಇಲ್ಲ ಏನಾದರೊಂದು ಹೇಳಿಬಿಡು" ಎಂದ ನಾನೂ "ಹೂಂ–ಹೇಳು" ಎಂದೆ. ಅವಳು ಹೇಳತೊಡಗಿದಳು : "ಪರಮಾತ್ಮ ಹರೇ–ಪಾವನ ನಾಮಾ....".

ನಾವು ಆ ಕೀರ್ತನೆಯನ್ನು ಎಷ್ಟು ಸಾರಿ ಕೇಳಲಿಲ್ಲ ! ಅದೂ ಹೆಸರಾದ ಸಂಗೀತಗಾರರ ಕೊರಳಿನಿಂದ !! ಅವರ ವಿದ್ವತ್ತೂ, ಶಬ್ದ ಚಮತ್ಕಾರವೂ ಪಾರುವಿನ ಕೊರಳಿಗಿರಲಿಲ್ಲ: ಹೌದು, ಆದರೆ ಆ ಸ್ವರ, ಆ ಮಾಧುರ್ಯ. ಹೃದಯ ವನ್ನು ಕದಡಿಬಿಡುವ ಆ ಶಕ್ತಿ ಅದೆಲ್ಲಾ ನಾವು ನೂರಾರು ಸಾರಿ ಕೇಳಿ ಹಳೆಯದು ಎಂದು ಬಿಟ್ಟಿದ್ದ ಆ ಕೀರ್ತನೆಯಲ್ಲಿ ತುಂಬಿ ಹರಿಸಿದ್ದಳು ಪಾರು. "ಪರಮಾತ್ಮ ಹರೇ–ಪಾವನ ನಾಮಾ...."

ನಮ್ಮ ಮೆಚ್ಚುಗೆಯ ಅರಿವಿಲ್ಲದೆಯೇ ಅವಳು ಹಾಡುತ್ತಿದ್ದಳು, ಯಾವಾಗಲಾದರೂ ನೆಲವನ್ನು ನೋಡುವ ಅವಳ ನೋಟವು ಅವಳ ಪರಿವೆಯಿಲ್ಲದೆಯೇ ಪರಮಾತ್ಮನನ್ನು ನೋಡುತ್ತಿದೆಯೋ ಏನೋ ಎಂಬಂತೆ ಆಕಾಶದ ಕಡೆ ನೋಡುತ್ತಿತ್ತು. ಅವಳನ್ನು ಕುರೂಪಿ ಎಂದು ಹೇಳಿದೆನಲ್ಲ ! ಎಂತಹ ಹುಚ್ಚು ನನಗೆ ! ಅವಳ ಆ ಸೌಂದರ್ಯದಿಂದ ತುಂಬಿದ ಹೃದಯದ ಕನ್ನಡಿಗಳಂತಿದ್ದ ಆ ಎರಡು ಕಣ್ಣು ಸಾಲವೆ ? ಆ ಸರ್ವಸಾಮಾನ್ಯ ಮುಖಕ್ಕೆ ಸ್ವರ್ಗೀಯ ಸೌಂದರ್ಯವನ್ನು ಕೊಟ್ಟಿದ್ದ ಆ ಕಣ್ಣುಗಳನ್ನು ನೋಡದೆ ಅವಳು ಕುರೂಪಿ ಎಂದುಕೊಂಡಿದ್ದೆನಲ್ಲ–ಎಂತಹ ಅಕ್ಷಮ್ಯ ಮೂಢತನ ? ಬಿಳಿ ಚರ್ಮ. ಉದ್ದವಾದ ಕೇಶರಾಶಿ. ಎಳಸು ಮೂಗು, ಚೆಂದುಟಿಗಳು–ಇವೆಲ್ಲಾ ಇದ್ದರೇನೇ ಸೌಂದರ್ಯ ವೆಂದಿದ್ದ ನನ್ನ ಭಾವನೆ ಕ್ಷಣ ಮಾತ್ರದಲ್ಲಿ ಬದಲಾಯ್ತು. ಸುಂದರವಲ್ಲದ ರೂಪದ ಒಳಗೂ ಅತ್ಯಂತ ಸುಂದರವಾದ ಹೃದಯಗಳಿರುವುವು ಎಂಬುದನ್ನು ಪಾರುವಿನ ಕಣ್ಣುಗಳು ನನಗೆ ತೋರಿಸಿಕೊಟ್ಟವು. ಮತ್ತೆ ಆ ಸುಂದರವಾದ ಹೃದಯ ರೂಪಸೌಂದರ್ಯದಂತೆ ಬಹು ಬೇಗನೆ ಮಾಸದೆ ಸುಂದರವಾಗಿಯೇ ಇರುವುದು ಎಂಬುದರ ಅರಿವನ್ನೂ ನನಗೆ ಮಾಡಿ ಕೊಟ್ಟವು ಪಾರುವಿನ ಆ ಕಣ್ಣುಗಳೇ.

ಕೂತು ಬೇಸತ್ತಿದ್ದ ಕಿಟ್ಟಣ್ಣನ ಬೇಸರವೆಲ್ಲಿ ಹೋಯ್ತೋ ? ಆ ಹಾಡು ಮುಗಿಯುವುದೇ ತಡ "ಇನ್ನೊಂದು ಹೇಳಮ್ಮಾ" ಎಂದ, ನಾನು ತಿಳಿದುಕೊಂಡಿದ್ದೆ "ನಂಗೆ ಬರೋದಿಲ್ಲ ಇನ್ನು-ಗಂಟಲು ಸರಿಯಾಗಿಲ್ಲ– ಈಗ ಸಾಕು" ಎಂದೇ ನಾದರೂ ಹೇಳುವಳೋ ಎಂದು, ಒಂದೂ ಇಲ್ಲ. ಕಿಟ್ಟಣ್ಣ ಹೇಳಿದುದೇ ತಡ, ನನ್ನ ಮುಖ ನೋಡಿದಳು "ಹೇಳಲೇ ? ಎಂದು ಕೇಳುವಂತೆ, ನಾನು ಮಾತನಾಡಲಾರದೆ "ಹೂಂ" ಎಂದು ತಲೆ ಅಲ್ಲಾಡಿಸಿದೆ. ಅವಳು ಪುನಃ ಹೇಳಿದಳು ;

"ನಾನೇಕೆ ಬಡವಾನೈಯ್ಯಾ...." ಇದೂ ನಾವು ನೂರಾರು ಸಾರಿ ಕೇಳಿ ಕೇಳಿ ಬೇಸತ್ತ ಕೀರ್ತನೆಯೇ. ಆದರೂ ಪಾರುವಿನ ಕೊರಳಿನಿಂದ ಹೊರಡುವಾಗ....!

ಅದು ಮುಗಿದ ಮೇಲೆ ಇನ್ನೂ ಹೇಳಿಸಬೇಕೆಂದು ಕಿಟ್ಟಣ್ಣನಿಗೆ ಆಸೆ. ನನಗೂ ಇರಲಿಲ್ಲವೆಂತಲ್ಲ. ಆದರೆ ನೋಡಿ ಅವಳು ದರಿದ್ರ ಗುಮಾಸ್ತರ ಕುರೂಪಿ ಮಗಳು. ಕಿಟ್ಟಣ್ಣನ ಮಡದಿ-ಜಮೀನ್ದಾರರ ಏಕಮಾತ್ರ ಪುತ್ರಿ ಹಾರ್ಮೋನಿಯಂ ನೊಡನೆ ಹಾಡಿ ಕಿಟ್ಟಣ್ಣನಿಗೆ ತಾಂಬೂಲಾದಿಗಳನ್ನು ಕೊಡಬೇಕಾಗಿರೋವಾಗ, ಅವಳಿಗೆ ಪ್ರಾಶಸ್ತ್ಯವನ್ನು ಕೊಟ್ಟು ಹಾಡಿಸುತ್ತಿರುವುದೇ ?

ಅರಿಸಿನ ಕುಂಕುಮ ತಾಂಬೂಲಾದಿಗಳನ್ನು ಹಂಚುವ ಸಂಭ್ರಮಗಳು ತೀರುವಾಗ ಪಾರು ಹೊರಟುಹೋಗಿದ್ದಳು. ಮರುದಿನ ಬಂದಿದ್ದರೂ ನಮಗೆ ಜಮೀನುದಾರರ ಬಂಧು–ಮಿತ್ರಾದಿಗಳ ಮನೆಗೆ ಔತಣಾದಿಗಳಿಗೆ ಹೋಗುವ ಸಂಭ್ರಮ ದಲ್ಲಿ ಹಾಡಿಸಲು ಸಮಯವಿಲ್ಲ. ಕೆಲಸದ ಗಲಾಟೆಯಲ್ಲಿ ಅವಳಿಗೂ ಪುರುಸೊತ್ತಿಲ್ಲ, ಕಿಟ್ಟಣ್ಣನಂತೂ "ಪಾರೂ ಹತ್ತಿರ ಹಾಡಿಸಬೇಕು ಅವಳು ಬಂದರೆ ಇಲ್ಲಿಗೆ ಕರೆದುಕೊಂಡು ಬಾ" ಎಂದು ಅನೇಕ ಸಾರಿ ಹೇಳಿದ. ಆದರೆ ಹೇಳಿದೆನಲ್ಲ, ಗಡಿ ಬಿಡಿಯಲ್ಲಿ ಆಗಲೇ ಇಲ್ಲ, ಅಂತೂ ನಾವು ಹೊರಡುವ ತನಕವೂ ಪುನಃ ಅವಳಿಂದ ಹಾಡಿಸಲು ಏನೇನೋ ಕಾರಣಗಳಿಂದ ಆಗಲೇ ಇಲ್ಲ: ಹಾಗೆಯೇ ಹೊರಟುಬಿಟ್ಟೆವು,

ನಮ್ಮನ್ನು ಕಳುಹಿಸಲು ಬಂದಿದ್ದವರೊಡನೆ ಅವಳೂ ಬಸ್ಸಿನ ತನಕ ಬಂದಿದ್ದಳು, ಬಸ್ಸು ಹತ್ತೋವಾಗ "ಹೋಗಿ ಬರ್ತೇನೆ ಪಾರು; ನಿನ್ನ ಮದ್ವೆಗೆ ನಂಗೆ ಕಾಗ್ದಾ ಹಾಕ್ಸು" ಎಂದೆ, ಅಲ್ಲೇ ನಿಂತಿದ್ದ ಅವಳ ತಂದೆ "ಹಾಕ್ದೇ ಇರ್ತೇವ್ಯೇ-ಆದರೆ ನೋಡಪ್ಪಯ್ಯಿ–ಲಗ್ನಕ್ಕೂ ದಿನ ಬರ್ಬೇಕಲ್ಲಾ" ಎಂದು ನಿಟ್ಟುಸಿರು ಬಿಟ್ಟರು.

ಎರಡು ವರ್ಷಗಳ ತರುವಾಯ ಕಿಟ್ಟಣ್ಣನ ಹೆಂಡತಿ ಅತ್ತಿಗೆ ತೌರೂರಿಗೆ ಹೋಗಿದ್ದಾಗ ಪಾರುವಿನ ಮದುವೆಯಾ ಯಿತಂತೆ, ನನಗೂ ಕಾಗದ ಬಂದಿತ್ತು. ಏನೇನೋ ಸಂದರ್ಭಗಳಿಂದ ಹೋಗಲಾಗಲಿಲ್ಲ, ಅತ್ತಿಗೆ ಹಿಂತಿರುಗಿ ಬಂದಮೇಲೆ

ಆವಳಿಂದ ಪಾರುವಿನ ಸುದ್ದಿ ಎಲ್ಲಾ ಕೇಳಿ ತಿಳಿದುಕೊಂಡೆ. ಅತ್ತಿಗೆಯು ಹೇಳಿಕೆ: ದರಿದ್ರ ಗುಮಾಸ್ತರ ಕುರೂಪಿ ಮಗಳಿಗೆ ಅವಳ ಯೋಗ್ಯತೆಯನ್ನು ಮೀರಿದ ವರನೇ ದೊರೆತನೆಂದು, ಆದರೆ ಅಪ್ಪರಿಂದ ನಮಗೆ ತೃಪ್ತಿಯಿಲ್ಲ. ಬಿಡಿಸಿ ಕೇಳಿದೆ. ಅವಳು ಹೇಳಿದ ಮಾತುಗಳಿವು. "ಹೌದು, ಅವಳಿಗೆ ಮದುವೆಯಾಯಿತು. ಆ ಕುರೂಪಿಗೆ ಯೋಗ್ಯನಾದ ವರನೆಲ್ಲಿ ದೊರೆಯಬೇಕು ಹೇಳಿ. ಅದೂ ವರದಕ್ಷಿಣೆ ಒಂದು ಕಾಸೂ ಇಲ್ಲದೆ, ಅದೇನೋ ಅವಳ ಪೂರ್ವಜನ್ಮದ ಸುಕೃತ. ಅದೇ ಸ್ವಲ್ಪ ಕ್ಷಯದವನಾದರೂ ಊಟ ಬಟ್ಟೆಗಳಿಗೆ ಕೊರತೆ ಇಲ್ಲದಷ್ಟು ಇರುವಾತ. ಎರಡೂ ಖರ್ಚು ವಹಿಸಿಕೊಂಡು ಅವಳನ್ನು ಮದುವೆಯಾದ. ಗಂಡನ ಮನೆಯಲ್ಲಿ ಅತ್ತೆ ಮಾವ ಯಾರೂ ಇಲ್ಲ. ಗಂಡನನ್ನು ಸ್ವಲ್ಪ ಆರೈಕೆ ಮಾಡಿ ಕೊಂಡಿದ್ದರೆ ಸರಿ- ಉಂಡುಟ್ಟು ಸುಖವಾಗಿರಲು ಯಾವ ತೊಂದರೆಯೂ ಇಲ್ಲ, ನಿಜವಾಗಿಯೂ ಪಾರು ಭಾಗ್ಯಶಾಲಿನಿ".

ಜಮೀನದಾರರ ಏಕಮಾತ್ರ ಪುತ್ರಿ, ಒಳ್ಳೆ ಸಂಪಾದನೆ ಇರುವ ಡಾಕ್ಟರ್ ಕೃಷ್ಣಸ್ವಾಮಿಯ ಹೆಂಡತಿ, ತನ್ನಪ್ಪನ ದರಿದ್ರ ಗುಮಾಸ್ತರ ಮಗಳು ಪಾರುವನ್ನು ವರದಕ್ಷಿಣೆ ಖರ್ಚು–ವೆಚ್ಚ ಒಂದೂ ಇಲ್ಲದೆ, ಕ್ಷಯರೋಗಿಯಾದರೇನು ? ಉಂಡುಡಲು ಬೇಕಾದಷ್ಟಿರುವಾತ ಮದುವೆಯಾದುದನ್ನು ನೋಡಿ ಅದು ಅವಳ ಭಾಗ್ಯ ಎಂದು ತಿಳಿದುಕೊಂಡರೆ ತಪ್ಪೇನು ಹೇಳಿ ? ಹೌದು ಆದು ಅವಳ ಭಾಗ್ಯ. . ! O

---

## ಅನುಪಮ ನೆನಪು

ಹೂವಿನ ಹಾರಗಳ ಹೊದ್ದ ನಿರಾತಂಕ ನಿದ್ದೆಯಲ್ಲಿ
ಪರಿಮಳಿಸುವ ಸಾವಿನೊಂದು ಸಾಂಕ್ರಾಮಿಕ ಕಥೆಯಿದೆ
ಸುಂದರ : ಎಂಥ ಬಂಧುರ ; ಎಷ್ಟೊಂದು ಸಂಪೂರ್ಣ ತತ್ವ ?

ಹೊಕ್ಕಳಿನ ಬಳ್ಳಿ ಹೊತ್ತಿಸಿ ಚೆಲ್ಲುವ ಬೆಳಕು ಅಪ್ಪ–ಅಮ್ಮರ
"ಕಥೆ"ಗೆ ನೆತ್ತರ ಕಾಣಿಕೆಯಲ್ಲಿ ಮಕ್ಕಳ ಕೊಡುಗೆಯಾದ ಸತ್ಯ
ಸುಂದರ : ಎಂಥ ಬಂಧುರ ; ಎಷ್ಟೊಂದು ಸಂಪೂರ್ಣ ಸತ್ವ ?

ಕ್ಯಾನ್ಸರ್‌ನಂಥ ಕಾಟಕ್ಕೆ ಬದುಕಿನ ಸರಿಸಮ ಪಾಠದ ಪಾಠಕ್ಕೆ
ಸೊಪ್ಪು ಹಾಕದ ರೀತಿ ನೀತಿಯು ಕೂಡ ಸ್ವಂತ ಡಾಕ್ಟರಿಗೆ ಮದ್ದು
ಸುಂದರ : ಎಂಥ ಬಂಧುರ ; ಎಷ್ಟೊಂದು ಸಂವಿಧಾನ ಮಹತ್ವ ?

"ಅಪ್ಪ"ನಾದದ್ದು ಹುಟ್ಟಿಂದ ಹೋರಾಟದ ಸೆಣೆಸಾಟದ ಬದುಕು
ಅಮ್ಮನಾದದ್ದು ಕೂಡ ಸಾಹಸದ ಹೆಣ್ಣಿನಾತಂಕದ ಸರಕು
ಸುಂದರ : ಎಂಥ ಬಂಧುರ ; ಎಷ್ಟೊಂದು ಸಂಪುಟದ ಸುತ್ತು ?

ರೋಗವೆಂದಿಗೂ ಬದುಕನ್ನಪಮೌಲ್ಯಗೊಳಿಸಲಾರದ ಶತ್ರು !
ಮಗುಗಳ ನಗೆಯ(ಲ್ಲಿ) ತಾಯ್ತಿತನದ (ಲ್ಲಿ) ಅನುಪಮ ನೆನಪು ಸ್ವತ್ತು !

☐ ಕ.ವೆಂ. ರಾಜಗೋಪಾಲ್

# ಕಾನೂನು ಸಲಹೆ

ಹೇಮಲತಾ ಮಹಿಷಿ

ಪ್ರಶ್ನೆ ; ನಾನೊಬ್ಬ ವಿವಾಹಿತ, ನನಗೆ ಮದುವೆಯಾಗಿ ನಾಲ್ಕು ವರ್ಷವಾಗಿದೆ. ಟೆಕ್ಸ್‌ಟೈಲ್ಸ್ ಮಿಲ್‌ನಲ್ಲಿ ಕೆಲಸ ಮಾಡುತ್ತಿರುವೆ. 2 ವರ್ಷದ ಮಗಳಿದ್ದಾಳೆ. ಮದುವೆಯಾದಂದಿನಿಂದ ನನ್ನ ಹೆಂಡತಿ ನನಗೆ ಮತ್ತು ನನ್ನ ಮನೆಯವರಿಗೆ ಸರಿಯಾಗಿ ಹೊಂದಿಕೊಳ್ಳದೆ ಕಷ್ಟ ಕೊಡುತ್ತಿದ್ದಾಳೆ. ಈಗ ಒಂದು ವರ್ಷದ ಹಿಂದೆ ದಾವಣಗೆರೆಯಲ್ಲಿರುವ ತೌರಿಗೆ ಹೋದವಳು ಹಿಂತಿರುಗಿ ಬಂದಿಲ್ಲ, ಬಂದಾಗಲೂ ನನ್ನ ಮನೆಯಲ್ಲಿ ಎರಡು ದಿನವೂ ಇರದೆ ತೌರಿಗೆ ಹಿಂತಿರುಗುತ್ತಾಳೆ, ವಿವಾಹ ವಿಚ್ಛೇದನಕ್ಕೆಂದು ಮುಂದುವರಿಯೋಣವೆಂದರೆ, ಅವಳಿಗೆ ಮತ್ತು ಮಗುವಿಗೆ ನಿರ್ವಹಣಾ ಭತ್ಯೆ ಕೊಡಬೇಕಾಗುತ್ತದೆ. ನನ್ನ ಅಲ್ಪ ಆದಾಯದಲ್ಲಿ ಇದು ನನಗೆ ಭರಿಸಲಾಗದ ಖರ್ಚಾಗುತ್ತದೆ. ಅವಳೇ ಬಂದು ನನ್ನೊಡನೆ ಸರಿಯಾಗಿ ಸಂಸಾರ ಮಾಡುವುದಾದರೆ ಈಗಲೂ ನಾನು ಅವಳನ್ನೊಪ್ಪಿಕೊಳ್ಳಲು ಸಿದ್ಧ. ವಿವಾಹ ವಿಚ್ಛೇದನದ ಕಾನೂನು ಇಂತಹ ಸಂದರ್ಭದಲ್ಲಿ ಪುರುಷರಿಗೆ ಏನೂ ನೆರವು ನೀಡುವುದಿಲ್ಲವಲ್ಲಾ. ನೀವೇನು ಮಾರ್ಗದರ್ಶನ ಮಾಡುತ್ತೀರಿ.

ಬೆಂಗಳೂರು — ರಾಚಪ್ಪ

ಉತ್ತರ : ವಿವಾಹ ವಿಚ್ಛೇದನದ ಕಾನೂನು ಪುರುಷ-ಮಹಿಳೆ ಎಂದು ಭೇದ ಮಾಡುವುದಿಲ್ಲ, ಇಬ್ಬರಿಗೂ ಇರುವುದು ಒಂದೇ ಕಾನೂನು. ವಿವಾಹ ವಿಚ್ಛೇದನಕ್ಕೆಂದು ನೀವು ಮುಂದುವರಿಯದಿದ್ದರೂ, ನಿಮ್ಮ ಪತ್ನಿಯೇ ಜೀವನಾಂಶ ಕೇಳಿ ನ್ಯಾಯಾಲಯಕ್ಕೆ ಹೋಗಲು ಅವಕಾಶವಿರುತ್ತದೆ, ನಿಮ್ಮ ಪತ್ನಿಗೆ ಜೀವನಾಂಶ ಸಿಗಬೇಕಾದರೆ ಅವರಿಗೆ ಯಾವುದೇ ಆದಾಯವಿರಕೂಡದು. ನೀವು ನಿಮ್ಮ ಪತ್ನಿಯೊಂದಿಗೆ ಜೀವನ ನಡೆಸಲು ಸಿದ್ಧರಿರುವುದರಿಂದ ಅವರು ಹಿಂತಿರುಗಿ ಬಂದು ನಿಮ್ಮೊಂದಿಗೆ ಸಂಸಾರ ನಡೆಸಬೇಕೆಂದು ಕೇಳಿ ನ್ಯಾಯಾಲಯಕ್ಕೆ ಅರ್ಜಿ ಹಾಕಬಹುದು (For Restitution of Conjugal Rights) ನ್ಯಾಯಾಲಯದಿಂದ ಆ ಪ್ರಕಾರವೇ ಡಿಕ್ರಿ ಆದ ಮೇಲೂ ಒಂದು ವರ್ಷ ಕಾಲ ಅವರು ವಾಪಸ್ಸು ಬರದಿದ್ದರೆ, ಆ ಕಾರಣದ ಮೇಲೆ ವಿಚ್ಛೇದನ ಕೇಳಬಹುದು.

ಪ್ರಶ್ನೆ : ನಾನೊಬ್ಬ ವಿವಾಹಿತೆ, ಕಳೆದ ಮೂರು ವರ್ಷಗಳಿಂದ ಗಂಡನಿಂದ ದೂರವಿದ್ದೇನೆ. ನಮ್ಮಿಬ್ಬರ ನಡುವಿರುವ ಆಗಾಧವಾದ ಅಭಿಪ್ರಾಯ ಭೇದಗಳಿಂದ ನಾವಿಬ್ಬರು ಒಟ್ಟಿಗೆ ವಾಸಿಸುವುದು ಸಾಧ್ಯವೂ ಇಲ್ಲ, ಅದು ನನಗೆ ಬೇಕಾಗಿಯೂ ಇಲ್ಲ, ನನ್ನ ಇಲ್ಲಿನ ಅನುಭವದಿಂದ ನನಗೆ ಮತ್ತೊಮ್ಮೆ ಮದುವೆ ಬೇಕೆಂದು ಅನಿಸದಂತೆ ಮಾಡಿದೆ. ನಾನು ಬ್ಯಾಂಕೊಂದರಲ್ಲಿ ಕೆಲಸ ಮಾಡುತ್ತಿರುವೆ. ನನ್ನ Official Recordsನಲ್ಲಿ ಪತಿಯ ಹೆಸರು ಇದೆಯಾದರೂ ನಮ್ಮದು ಕಾನೂನು ಸಮ್ಮತ ವಿವಾಹವಲ್ಲ. ಗುಡಿಯಲ್ಲಿ ನಡೆದ ವಿವಾಹ. ಈಗ ನಾನು ಅಧಿಕೃತವಾಗಿ ವಿವಾಹ ವಿಚ್ಛೇದನ ಪಡೆಯದಿದ್ದರೆ ಮುಂದೇನು ತೊಂದರೆಯಾಗುತ್ತದೆ ?

ಕಾನ್‌ಪುರ — ಸರೋಜ

ಉತ್ತರ : ನಿಮಗೆ ಪತಿಯೊಂದಿಗೆ ಜೀವನ ನಡೆಸಲು ಸಾಧ್ಯವಿಲ್ಲದಿದ್ದಲ್ಲಿ ವಿವಾಹ ವಿಚ್ಛೇದನ ಪಡೆಯುವುದು ಒಳ್ಳೆಯದು, ಆದರೆ ನಿಮ್ಮ ವಿವಾಹ ಕಾನೂನು ಸಮ್ಮತವಲ್ಲದಿದ್ದರೆ ಆ ಬಗ್ಗೆ ಒಂದು ಮೊಕದ್ದಮೆ ಹಾಕಿ, ಕಾನೂನು ಸಮ್ಮತ ವಿವಾಹವಲ್ಲವೆಂಬ ಘೋಷಣೆಯನ್ನು ನ್ಯಾಯಾಲಯದಿಂದ ಪಡೆಯಬೇಕಾಗುತ್ತದೆ.

# “ ವರದಕ್ಷಿಣೆ ” ಮೂರು ಪ್ರಶ್ನೆಗಳು

❋ ರಂಗನಾಯಕಮ್ಮ

ರಂಗನಾಯಕಮ್ಮ ಆಧುನಿಕ ತೆಲುಗು ಸಾಹಿತ್ಯದ ಅತ್ಯಂತ ವಿವಾದಾಸ್ಪದ ಲೇಖಕಿ. ಆಕೆ ವಿವಾದಾತ್ಮಕ ಸಣ್ಣ ಕತೆಗಳನ್ನು, ಕಾದಂಬರಿಗಳನ್ನು, ರಾಜಕೀಯ ಟಿಪ್ಪಣಿಗಳನ್ನು, ಪ್ರಬಂಧಗಳನ್ನು ಬರೆದಿದ್ದಾರೆ, ಅನೇಕ ಅನುವಾದಗಳನ್ನು ಮಾಡಿದ್ದಾರೆ. ರಂಗನಾಯಕಮ್ಮ ಶ್ರೇಷ್ಠ ಸ್ತ್ರೀವಾದಿ ಕೂಡ, ಆಕೆಯ ಓದುಗರು ವರದಕ್ಷಿಣೆಯನ್ನು ಕುರಿತಂತೆ “ಆಂಧ್ರ ಜ್ಯೋತಿ” ಪತ್ರಿಕೆಯಲ್ಲಿ ಕೇಳಿದ ಪ್ರಶ್ನೆಗಳಿಗೆ ಅವರ ಉತ್ತರ ಇಲ್ಲಿವೆ,

1, ನಮ್ಮ ಸಮಾಜದಲ್ಲಿ ದೊಡ್ಡ ಪಿಡುಗಾಗಿರುವ ವರದಕ್ಷಿಣೆ ಪದ್ಧತಿಗೆ ಮುಖ್ಯ ಕಾರಣ ಯಾರು ? ಯುವಕರೇ ? ಸಂಪ್ರದಾಯವೇ ಅಥವಾ ಹೆತ್ತವರ ದುರಾಸೆಯೇ ?

ಉತ್ತರ : ಎಲ್ಲವೂ ಕಾರಣಗಳೇ ವರದಕ್ಷಿಣೆಗೆ ಸಂಬಂಧಪಟ್ಟಂತೆ ಯಾವುದೇ ಒಂದೇ ಒಂದು ಅಂಶವನ್ನು ಕಾರಣ ಎಂದು ಹೇಳಲು ಸಾಧ್ಯವಿಲ್ಲ, ಸಾವಿರಾರು ವರ್ಷಗಳಿಂದ ಈ ಪದ್ಧತಿ ರೂಢಿಯಲ್ಲಿದೆ, ಆದರೂ ಮುಖ್ಯವಾಗಿ ಒಂದು ಮೂಲ ಕಾರಣವನ್ನು ವರದಕ್ಷಿಣೆಯ ಹಿನ್ನೆಲೆಯಾಗಿದೆ ಎಂದು ಹೇಳಬಹುದು. ಅದೇ ಆಸ್ತಿಯನ್ನು ಪಡೆಯಬೇಕೆಂಬ ಬಯಕೆ ಅದಕ್ಕೂ ಮುಂದುವರಿದಂತೆ ಮತ್ತೊಂದು ಕಾರಣ, ಸ್ತ್ರೀ ಪುರುಷರ ನಡುವಣ ಅಸಮಾನತೆ, ಮಕ್ಕಳು ತಂದೆ-ತಾಯಿಗಳ ಆಸ್ತಿಯಲ್ಲಿ ಪಾಲು ಪಡೆಯುವುದು ಸಹಜವಾದ್ದರಿಂದ, ಹೆಣ್ಣಿನ ಪಾಲಿನ ಆಸ್ತಿ ಈ ವರದಕ್ಷಿಣೆಯೇ ಆಗಿದೆ. ಆದ್ದರಿಂದ ಇಲ್ಲಿ ವರದಕ್ಷಿಣೆಯ ಸ್ವರೂಪವನ್ನು ಗಮನಿಸಿದಾಗ ಅದು ಆಸ್ತಿ ವಿಂಗಡಣೆಯ ಒಂದು ಭಾಗವಾಗಿ ಬಂದಿವೆ. ಈ ಹೆಣ್ಣಿನ ಆಸ್ತಿಯ ಭಾಗವನ್ನು ಮದುವೆಯ ಸಂದರ್ಭದಲ್ಲಿ ವರದಕ್ಷಿಣೆಯಾಗಿ ಕೊಡುವುದು. ಅದರಲ್ಲೂ ಈ ಆಸ್ತಿಯ ಭಾಗದ ಒಂದು ಪಾಲನ್ನು ವರನಿಗೆ ಕೊಡುವುದು, ಅಷ್ಟೇ ಅಲ್ಲ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ಈ ಆಸ್ತಿಯ ವಿಂಗಡಣೆಯಲ್ಲಿ ಸಮಪಾಲು ಇಲ್ಲದಿರುವುದು-ಈ ಎಲ್ಲ ಕಾರಣಗಳಿಂದ ಸ್ತ್ರೀ-ಪುರುಷರ ನಡುವೆ ಅಸಮಾನತೆ ಉಂಟಾಗಿವೆ. ಇದು ಆಸ್ತಿವಂತ ಕುಟುಂಬಗಳ ಸಮಾಚಾರವಾದರೂ ಈ ಪದ್ಧತಿಯೇ ಮುಂದೆ ಆಸ್ತಿರಹಿತ ಕುಟುಂಬಗಳಿಗೂ ಹಬ್ಬಿವೆ,

2. ವರದಕ್ಷಿಣೆ ಪಿಡುಗನ್ನು ನಿವಾರಿಸಲು ಸಮಾಜದಲ್ಲಿ ಎಂತಹ ಬದಲಾವಣೆಗಳಾಗಬೇಕೆಂದು ಅಪೇಕ್ಷಿಸುತ್ತೀರಾ ?

ಉತ್ತರ : ನಾವು ಈ ಕೆಲವು ಬದಲಾವಣೆಗಳನ್ನು ಬಯಸುತ್ತೇವೆ,

(1) ಹೆಣ್ಣು ಮಕ್ಕಳ ಪಾಲಿನ ಆಸ್ತಿಯನ್ನು ಆಸ್ತಿಯಾಗಿಯೇ ಹೆಣ್ಣು ಮಕ್ಕಳಿಗೆ ಕೊಡಬೇಕೇ ಹೊರತು ಮದುವೆಯ ಸಂದರ್ಭದಲ್ಲಿ, ವರದಕ್ಷಿಣೆಯಾಗಿ ಅಲ್ಲ,

(2) ಹೆಣ್ಣು ಮಕ್ಕಳು ಗಂಡು ಮಕ್ಕಳಿಗೆ ಸರಿಸಮಾನವಾಗಿ ಆಸ್ತಿಯಲ್ಲಿ ಪಾಲು ಪಡೆಯಬೇಕು,

(3) ಆಸ್ತಿ ವಿಂಗಡಣೆಯಾಗುವ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಆಸ್ತಿಯನ್ನು ಪಡೆಯಬೇಕೇ ವಿನಹ ಮದುವೆಯ ಸಂದರ್ಭದಲ್ಲಿ ಆಸ್ತಿಯನ್ನು ಕೇಳುವಂತೆ ಇಲ್ಲ. ಈ ಬದಲಾವಣೆಗಳನ್ನು ಜಾರಿಗೆ ತರುವಲ್ಲಿ ಯಶಸ್ವಿಯಾದರೆ ವರದಕ್ಷಿಣೆ ಪದ್ಧತಿ ಸಂಪೂರ್ಣವಾಗಿ ನಿವಾರಣೆಯಾಗುತ್ತದೆಂದು ಹೇಳಲಾಗದಿದ್ದರೂ ಆ ದಿಕ್ಕಿನತ್ತ ಮುಖ್ಯ ಹೆಜ್ಜೆ ಇಟ್ಟಂತಾಗುತ್ತದೆ,

(4) ಈ ಸಮಸ್ಯೆಯ ಪರಿಹಾರಕ್ಕೆ ಆಗಬೇಕಾಗಿರುವುದು ಮುಖ್ಯವಾಗಿ ಹೆಣ್ಣು ಮಕ್ಕಳಲ್ಲಿ ಆತ್ಮಗೌರವ ಹೆಚ್ಚಾಗಬೇಕು ಮತ್ತು ಸ್ತ್ರೀ ಪುರುಷರ ನಡುವಣ ಸಮಾನತೆಗೆ ದಾರಿಯಾಗಬೇಕು. ಆತ್ಮಗೌರವವಿಲ್ಲದೆ, ಇಲ್ಲವೇ ತಮ್ಮ ಕಾಲ ಮೇಲೆ ತಾವೇ ನಿಲ್ಲಲಾರದ ಹೆಣ್ಣು ಮಕ್ಕಳು, ದೃಡ ಸಂಕಲ್ಪ ಚಿತ್ತರಲ್ಲದ ಹೆಣ್ಣು ಮಕ್ಕಳಲ್ಲಿ ಮೊದಲು ಸುಧಾರಣೆಯಾಗಬೇಕು,

3, ತಮ್ಮನ್ನು ತಾವು ಮಾರಿಕೊಳ್ಳಲು ಸಿದ್ಧರಿರುವ, ತಂದೆ-ತಾಯಿಗಳ ದುರಾಶೆಗೆ ಅಡಿಯಾಳಾಗಲು ಸಿದ್ಧರಿರುವ ಯುವಕರಲ್ಲಿ ಬದಲಾವಣೆ ತರುವುದು ಹೇಗೆ ?

ಈ ಸಮಸ್ಯೆಯೂ ಆಸ್ತಿಯ ಸಮಸ್ಯೆಯೊಂದಿಗೇ ಸುತ್ತಿಕೊಂಡಿದೆ. ಇದನ್ನು ಎದುರಿಸಲು ನಾಲ್ಕು ಉಪಾಯಗಳಿವೆ, 1) ಮೊದಲು ವರದಕ್ಷಿಣೆಯನ್ನು, ಕೇಳುವ ಗಂಡಸರನ್ನು ಮದುವೆಯಾಗದಿರಲು ಹೆಣ್ಣುಮಕ್ಕಳು ನಿರ್ಧರಿಸಬೇಕು, 2). ಹೆತ್ತವರೂ ಕೂಡ ತಮ್ಮ ಹೆಣ್ಣು ಮಕ್ಕಳ ಆಸ್ತಿಯ ಪಾಲನ್ನು ಅವಳಿಗೇ ಕೊಡುತ್ತೇವೆಯೇ ಹೊರತು ವರನಿಗಲ್ಲ ಎಂಬುದನ್ನು ದೃಢಪಡಿಸಬೇಕು, 3), ತಂದೆ-ತಾಯಿಗಳು ಮಕ್ಕಳಲ್ಲಿ ಆತ್ಮಗೌರವ, ಸ್ವಾವಲಂಬನೆಯ ಮೌಲ್ಯಗಳು ಬೆಳೆಯುವಂತೆ ಶ್ರಮವಹಿಸಬೇಕು, 4) ಮಕ್ಕಳು ಮತ್ತು ತಂದೆ ತಾಯಿಗಳು ಸಮಾನವಾಗಿ ಯೋಚಿಸುವ ಇಲ್ಲವೇ ಪರಸ್ಪರ ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಬೇಕು.

ಯುವಕರಿಗೂ ಮದುವೆಯಾಗಲು ಹುಡುಗಿಯರು ಬೇಡವೇ ? ಆದ್ದರಿಂದ ಹುಡುಗಿಯರು ಮತ್ತು ಅವರ ತಂದೆ ತಾಯಿಗಳು ಮನಸ್ಸು ಮಾಡಿದರೆ ಯುವಕರ ಮನಸ್ಸಿನ ಮೇಲೆ ಪ್ರಭಾವ ಬೀರಲು ಸಾಧ್ಯವಾಗುತ್ತದೆ. ಶಾಸನಗಳನ್ನು ಜಾರಿಗೆ ತರುವುದು/ ಶಿಕ್ಷೆಗಳನ್ನು ವಿಧಿಸುವುದಕ್ಕಿಂತ ಇದು ಉತ್ತಮ ಮಾರ್ಗ,

ಅನು : ಸತ್ಯವಿಜಯಂ

## ಕಂಬನಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರದ ಪ್ರೀತಿಯ ಸಂಗಾತಿಯೂ "ಅಚಲ" ಪತ್ರಿಕೆಯ ಹಿತೈಷಿಯೂ ಆಗಿದ್ದ ಶ್ರೀಮತಿ ಮಾಲತಿ ಪಾರ್ಥಸಾರಥಿ ನಮ್ಮನ್ನಗಲಿದ್ದಾರೆ. ಬೆಂಗಳೂರಿನ ರಘೋತ್ತಮ ಸ್ಮಾರಕ ಪ್ರತಿಷ್ಠಾನದ ಸಕ್ರಿಯ ಕಾರ್ಯಕರ್ತೆಯಾಗಿದ್ದ ಮಾಲತಿ ಮೈತ್ರಿ ಮಹಿಳಾ ಸಂಘದ ಸ್ಥಾಪನೆಗೆ ಕಾರಣಕರ್ತರಲ್ಲಿ ಮುಖ್ಯರಾಗಿದ್ದರು. ಮೈತ್ರಿ ಮಹಿಳಾ ಸಂಘದ ಬೆನ್ನೆಲುಬಾಗಿ ದುಡಿದ ಮಾಲತಿ ಅಪಘಾತವೊಂದರಲ್ಲಿ ಸೆಪ್ಟೆಂಬರ್ 7ರಂದು ಅಸುನೀಗಿದರು. ಅಚಲ ತನ್ನ ಸಂಗಾತಿಯ ಸಾವಿಗೆ ತೀವ್ರ ಸಂತಾಪ ವ್ಯಕ್ತಪಡಿಸುತ್ತಾ, ಅವರ ಕುಟುಂಬವು ಮೃತರ ಸಾವಿನಿಂದ ಉಂಟಾದ ನಷ್ಟವನ್ನು ಭರಿಸುವ ಶಕ್ತಿಯನ್ನು ಪಡೆಯಲಿ ಎಂದು ಆಶಿಸುತ್ತದೆ,

*Reg. No. MAG (5) PRC. LECL 036/86-8*

BOOK-POST/PERIODICALS

To

If undelivered please return to :
**Jagruthi Mahila Adhyayana Kendra**
26, 1st Main Road, Vyalikaval
Bangalore-560 003.